

ಜುಲೈ, 1993

# ಸಪ್ತಗಿರಿ

ಬೆಲೆ : ರೂ. 2

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಹರಿನಾಮ ಘೋಷ ॥ ಪ ॥

ಎಲ್ಲಿ ಶ್ರೀ ಹರಿನಾಮ ಘೋಷ
ಅಲ್ಲಿ ಸಕಲ ಸುಖ ಸಂತೋಷ
ಸುಲಭವಹುದು ಭವ ಭಯನಾಶ
ಹರಿನಾಮ ಘೋಷ ॥ ೧ ॥

ಹರಿಸುವುದಾನಂದ ಹರುಷ
ಹರಿಸುವುದು ಕಲಿಮಲ ಕಲುಷ
ತ್ವರಿತೋಡಿಸುವುದು ಪಾತಕದೋಷ
ಹರಿನಾಮ ಘೋಷ ॥ ೨ ॥

ಸ್ವಹಿತ ಸಾಧನ ಸು ಉಪದೇಶ
ಬಾಹ್ಯಾಂತರ ದೋರುವ ಪ್ರಕಾಶ
ಮಹಿಪತಿಗಿದೆ ನಿತ್ಯ ಉಲ್ಲಾಸ
ಹರಿನಾಮ ಘೋಷ ॥ ೩ ॥

**---ಶ್ರೀ ಮಹಿಪತಿರಾಯರು.**

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ
# ತಿರುಮಲೆ.



## ವಾರ್ಷಿಕ ಪವಿತ್ರೋತ್ಸವ

28--7--93 ರಿಂದ 31--7--93 ವರೆಗೆ

| | | |
|---|---|---|
| 28--7--93 | ಬುಧವಾರ | ಅಂಕುರಾರ್ಪಣೆ. |
| 29--7--93 | ಗುರುವಾರ | ಪವಿತ್ರ ಪ್ರತಿಷ್ಠೆ. |
| 30--7--93 | ಶುಕ್ರವಾರ | ಪವಿತ್ರ ಸಮರ್ಪಣೆ. |
| 31--7--93 | ಶನಿವಾರ | ಪೂರ್ಣಾಹುತಿ. |

ಶ್ರಾವಣ ಮಾಸದಲ್ಲಿ ನಡೆಯುವ ಈ ಉತ್ಸವದಲ್ಲಿ ಗೃಹಸ್ಥರು ಆರ್ಜಿತ ಸೇವಾಶುಲ್ಕವನ್ನು ಸಲ್ಲಿಸಿ ಪಾಲುಗೊಳ್ಳಬಹುದು. ವಿವರಗಳಿಗಾಗಿ ನಿಮ್ಮ ಹತ್ತಿರದ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ತಾವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.





ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**




ಸಂಪುಟ ೨೪] ಜುಲೈ ೧೯೯೩ [ಸಂಚಿಕೆ ೨


# ವಿಷಯಸೂಚಿ



ಮುಖಚಿತ್ರ : ವರಲಕ್ಷ್ಮಿ-- ಚಿತ್ರ -- ಜಗದೀಶ್.
ಹಿಂಬದಿಯಲ್ಲಿ : ಪರಮಾಚಾರ್ಯ ಶ್ರೀ ಶ್ರೀ ಚಂದ್ರಶೇಖರೇಂದ್ರ ಸರಸ್ವತೀಸ್ವಾಮಿ
ಒಳಗಡೆ : 1. ತಿರುಮಲೆಯಲ್ಲಿ ಆನಿವರ ಆಸ್ಥಾನ.
2. ತಿರುಮಲೆಯಲ್ಲಿ ಪವಿತ್ರೋತ್ಸವ.




ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ

ಬ್ರಹ್ಮನಿಧಿಯಾದ ವ್ಯಾಸರನ್ನು ವಿಷ್ಣುರೂಪವೆಂದೇ ನಮಿಸಿದೆ ಭಾರತೀಯ ಪರಂಪರೆ. ಪರಾಶರ ಸತ್ಯವತೀ ಪುತ್ರ ಕೃಷ್ಣದ್ವೈಪಾಯನರು ತಮ್ಮ ಇಡೀ ಜೀವನವನ್ನು ಮಾನವ ಸಮಾಜದ ಶ್ರೇಯಸ್ಸಿಗಾಗಿ ಮೀಸಲಿಟ್ಟು ವಿದ್ವತ್ಪ್ರಪಂಚದಲ್ಲಿ ತೊಡಗಿಸಿಕೊಂಡವರು. ಹರಡಿ-ಹಂಚಿ ಗೋಜಲಾಗಿದ್ದ ವೇದಾರಣ್ಯವನ್ನು ವಿಂಗಡಿಸಿ, ವಿಭಾಗೀಕರಿಸಿ, ನಾಲ್ಕು ಮಂದಿ ಶಿಷ್ಯರಿಗೆ ಅದನ್ನು ಬೋಧಿಸಿ ಸೂಕ್ತ ರೀತಿಯಲ್ಲಿ ಪ್ರಸಾರ ಮಾಡಲು ಏರ್ಪಡಿಸಿದ್ದೇ ಅಲ್ಲದೆ ಬ್ರಹ್ಮ ಸೂತ್ರಗಳನ್ನೂ, ಪುರಾಣ, ಉಪಪುರಾಣಗಳನ್ನೂ, ಮುಖ್ಯವಾಗಿ ಭಾರತ ಭಾಗವತಗಳನ್ನು ರಚಿಸಿ ಧರ್ಮದ ಬಗ್ಗೆ ಪೂರ್ತಿ ಅರಿವನ್ನು ಪ್ರಸಾರ ಮಾಡಲು ಪ್ರಯತ್ನಿಸಿದರು. ಎಂತಲೇ ಅವರನ್ನು ಜನ ಪರಂಪರೆಯಿಂದ ಗುರುವೆಂದು ನಂಬಿ, ವಂದಿಸುತ್ತ ನಡೆದಿದೆ. ವ್ಯಾಸ ಪೂರ್ಣಿಮೆಯನ್ನು ಗುರುಪೂರ್ಣಿಮೆಯೆಂದು ಗುರುತಿಸಿ ಗುರುಪೂಜೆ ಮಾಡಿದೆ.

ಇದಿಷ್ಟೂ ಸಂಸ್ಕೃತದ ಮಾತಾಯಿತು. ದಕ್ಷಿಣದಲ್ಲಿ ವೈಷ್ಣವ ವಾಙ್ಮಯ ಆಳ್ವಾರ್‌ಗಳ ಪಾಶುರಗಳಾಗಿ ಹರಿದು ಬಂದರೂ ಅವೂ ಕಾಲಕ್ರಮದಲ್ಲಿ ಖಿಲವಾಗುತ್ತ ಕಾಲಗರ್ಭದಲ್ಲಿ ಲುಪ್ತವಾಗುತ್ತ ನಡೆದಾಗ ನಾಥಮುನಿಗಳು ಅವತರಿಸಿ ಬಂದರು. ಪ್ರಬಂಧಗಳನ್ನು ಸಂಗ್ರಹಿಸಿ, ಸಂಪಾದಿಸಿ ಮುಂದಿನ ಪೀಳಿಗೆಯವರಿಗಾಗಿ ವ್ಯವಸ್ಥಿತಗೊಳಿಸಿ ನೀಡಿದರು. ಚಿದಂಬರಂ ಬಳಿಯ ಕಾಟ್ಟು ಮನ್ನಾರ್ ಕೋಯಿಲಿನಲ್ಲಿ (ವೀರನಾರಾಯಣಪುರ) ಈಶ್ವರಭಟ್ಟ ತಾಮರೆಯಾಳ್ ಮಗನಾಗಿ ಜನಿಸಿ ಸಂಸ್ಕೃತದ ಸಂಪೂರ್ಣ ಪಾಂಡಿತ್ಯ ಪಡೆದರೂ ತಮಿಳು ಪಾಶುರಗಳ ಬಗ್ಗೆ ಪ್ರೀತಿ ಬೆಳೆಸಿಕೊಂಡು ಭಾರತವನ್ನೆಲ್ಲ ಸುತ್ತಿ ಅರ್ಚಾಮೂರ್ತಿಗಳನ್ನೆಲ್ಲ ಸಂದರ್ಶಿಸಿ, ನ್ಯಾಯತತ್ತ್ವ, ಯೋಗರಹಸ್ಯ ಪುರಷ ನಿರ್ಣಯ--ಗಳನ್ನು ಬರೆದು ಹರಿಪಾರಮ್ಯದ ಜ್ಞಾನವನ್ನು ಹರಡಲು ಪ್ರಯತ್ನಿಸಿದರು.

ಗ್ರಂಥ ಸಂಪಾದನಾ ಶಾಸ್ತ್ರ ವೈಜ್ಞಾನಿಕ ಸೂತ್ರಗಳನ್ನು ಪಡೆದು ವಿಶಿಷ್ಟ ಶಾಸ್ತ್ರವೆಂಬ ಪೆರ್ಮೆಯನ್ನು ಪಡೆದದ್ದು ಈಚೆಗೆ ಇಪ್ಪತ್ತನೆಯ ಶತಕದಲ್ಲಿ ಎಂದು ಹೇಳಬಹುದಾದರೂ ಹಿಂದೆ ಸಂಪಾದನೆಗಳು ಇರಲಿಲ್ಲ ಅಗಲಿಲ್ಲ ಎಂದೇನಲ್ಲ. ಆ ದೃಷ್ಟಿಯಲ್ಲಿ ವೇದಗಳನ್ನು ವಿಭಾಗಿಸಿದ ವ್ಯಾಸರೂ, ಪ್ರಬಂಧಗಳನ್ನು ಪ್ರಕಾಶಗೊಳಿಸಿದ ನಾಥಮುನಿಗಳೂ ಗ್ರಂಥ ಸಂಪಾದನಾ ಶಾಸ್ತ್ರದ ಆದ್ಯರು ಎಂದು ಹೇಳಲು ಅಡ್ಡಿಯಿಲ್ಲ. ಅವರುಗಳ ಕೆಲಸ ನಮ್ಮ ಮುಂದೆ ಇದೆ ಬಹುಕಾಲದಿಂದ ಎಂದರೂ, ಬೆಟ್ಟು ಮಾಡಿ ತೋರಿಸುವ ನ್ಯೂನತೆಗಳಿಲ್ಲವಾಗಿ ಅವರ ಕೆಲಸದಲ್ಲಿಯ ಶ್ರೇಷ್ಠತೆಯನ್ನು ಮನಗಾಣಬಹುದು.

ಇಂತಲ್ಲಿ ವ್ಯಾಸ ನಾಥಮುನಿಗಳ ತಿರುನಕ್ಷತ್ರಗಳು ಈ ತಿಂಗಳು ನಮ್ಮ ಮುಂದಿವೆ. ಅವರ ಜ್ಞಾನಪ್ರೇಮ, ಧರ್ಮನಿಷ್ಠೆ ಮೊದಲಾದ ಉನ್ನತ ಗುಣಗಳಲ್ಲಿ ಮನ ತೊಡಗಿಸಿ ನಮ್ಮ ಮಾರ್ಗವನ್ನು ಸುಲಭಗೊಳಿಸಿಕೊಳ್ಳಲು ಪ್ರಯತ್ನಿಸುವುದೇ ಇಂದು ನಾವು ಅವರಿಗೆ ನೀಡಬಹುದಾದ ನೆನಪಿನ ಕಾಣಿಕೆಯೆಂದು ಭಾವಿಸುವುದು ಉಚಿತವಾದೀತು.

ನಮೋಽಚಿಂತ್ಯಾದ್ಭುತಾಽಕ್ಲಿಷ್ಟ ಜ್ಞಾನ ವೈರಾಗ್ಯ ರಾಶಯೇ
ನಾಥಾಯ ಮನಯೇಽಗಾಧ ಭಗವದ್ಭಕ್ತಿ ಸಿಂಧವೇ

* * * * *

# ಪಾಂಚರಾತ್ರಾಗಮ

“ಆಗಮ” ಎಂದರೆ ಪೂಜೆಯ ವಿಧಾನ. ಪೂಜೆಯ ಪ್ರಕ್ರಿಯೆಗಳನ್ನು ಪ್ರಧಾನವಾಗಿ ತಿಳಿಸುವುದು ಆಗಮ ಶಾಸ್ತ್ರ. ಪೂಜಾ ಕ್ರಮವು ಪ್ರಧಾನವಾಗಿ ಅರ್ಚಾವತಾರದಲ್ಲಿ ಬಳಸಲಾಗುತ್ತದೆ. ಅರ್ಚಾವತಾರದಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ಪೂಜಿಸುವುದು ನಮ್ಮನಾಡಿನಲ್ಲಿದೆ. ಪ್ರತಿಷ್ಠಾಪಿಸಿದ ಮೂರ್ತಿಗಳಿಗೆ ಕ್ರಮಬದ್ಧವಾಗಿ ಪೂಜಾದಿಗಳು ನಡೆಸಲು ಭಗವಂತನಿಂದ ಹೇಳಲ್ಪಟ್ಟ ನಿಯಮಗಳನ್ನೂ ವಿಧಾನಗಳನ್ನೂ ತಿಳಿಸುವ ವೇದೋಕ್ತರೀತಿಗಳನ್ನು ಅನುಸರಿಸುವುದು ಆಗಮ ಶಾಸ್ತ್ರ. ಈ ಶಾಸ್ತ್ರದಲ್ಲಿ ಮುಖ್ಯವಾಗಿ ಶೈವಾಗಮ, ವೈಖಾನಸಾಗಮ, ಮತ್ತು ಪಾಂಚರಾತ್ರಾಗಮ. ಇವುಗಳಲ್ಲಿ ವಿವಿಧ ರೀತಿಯ ಕ್ರಮಗಳು ಇರುತ್ತವೆ. ಆಗಮದಲ್ಲಿ ಸೃಷ್ಟಿ, ಪ್ರಳಯ, ದೇವತಾರ್ಚನೆ, ಮಂತ್ರಸಾಧನೆ, ಮಂತ್ರಪುನಶ್ಚರಣ, ಷಟ್ಕರ್ಮಸಾಧನೆ ಮತ್ತು ಧ್ಯಾನಯೋಗ ಈ ಏಳು ವಿಷಯಗಳುಳ್ಳದ್ದಾಗಿರುವುದು. ಆಗಮವು ಉತ್ತಮ ಗತಿ ಪ್ರಾಪ್ತಿಯನ್ನೂ ತಿಳಿಸುತ್ತದೆ.

“ತಂತ್ರ”ವೆಂದರೆ ತತ್ವಗಳಿಗೂ ಮಂತ್ರಗಳಿಗೂ ಸಂಬಂಧ ಪಟ್ಟ ಸಕಲ ಅರ್ಥಗಳನ್ನು ವಿವರಿಸಿ ಜನರನ್ನು ಭಯದಿಂದ ರಕ್ಷಿಸುವುದೆಂದರ್ಥ. ಸ್ವಯಂ ಭಗವಂತನೇ ವಿಸ್ತಾರವಾಗಿ ಹೇಳುವ ಶಾಸ್ತ್ರವು ವಾಸುದೇವ ಶಾಸ್ತ್ರ ಎಂದು ಕರೆಯಲ್ಪಡುತ್ತದೆ. ಇದನ್ನು ಬ್ರಹ್ಮರುದ್ರ ಮತ್ತು ಇಂದ್ರಾದಿಗಳು ಅನುಷ್ಠಾನದಲ್ಲಿಟ್ಟುಕೊಂಡಿರುತ್ತಾರೆ. ವಾಸುದೇವ ಶ್ರೀಕೃಷ್ಣನ ಅರ್ಚಾವತಾರಗಳನ್ನು ಆರಾಧಿಸುವವರು ವಾಸುದೇವ ಮತಸ್ಥರು. ಈ ಶಾಸ್ತ್ರವನ್ನು ಪಾಂಚರಾತ್ರ ಶಾಸ್ತ್ರವೆಂದು ಕರೆಯುವ ವಾಡಿಕೆ.

ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು ಈ ಆರು ಗುಣಗಳಿಂದ ಕೂಡಿರುವವನೇ ಭಗವಂತ. ಈ ಆರು ಗುಣಗಳೂ ಪರಬ್ರಹ್ಮ ಸ್ವರೂಪನಾದ ಶ್ರೀಮನ್ನಾರಾಯಣನಲ್ಲಿದೆ.ಆದ್ದರಿಂದಲೆ ಅವನನ್ನು ಭಗವಂತ ಎಂದು ಹೇಳುವುದು. ಕೆಲವು ಸಂದರ್ಭಗಳಲ್ಲಿ ಹಲವರನ್ನು ಭಗವಾನ್ ಎಂದೂ ಕರೆಯುವುದುಂಟು. ಉದಾ! ಭಗವಾನ್ ವ್ಯಾಸರು, ಭಗವಾನ್ ರಾಮಾನುಜರು. ಆದರೆ ಇಂತಹ ವ್ಯಕ್ತಿಗಳು ಮೇಲೆ ತಿಳಿಸಿದ ಗುಣಗಳಿಂದ ರೂಪಿತರಾಗಿರುತ್ತಾರೆ. ಇವರು ವಿಶೇಷಜ್ಞರೂ, ಸರ್ವಜ್ಞರೂ ಮತ್ತು ಸಕಲ ಗುಣಸಂಪನ್ನರೂ ಆಗಿರುತ್ತಾರೆ.

ಪಾಂಚರಾತ್ರ ಶಾಸ್ತ್ರವನ್ನು ಭಗವತ್ ಶಾಸ್ತ್ರ ಎಂದೂ ಕರೆಯುವುದುಂಟು. ಕಾರಣ -- ಇದನ್ನು ಹೇಳಿದವನು ಭಗವಾನ್ ವಾಸುದೇವನು. ಈ ಶಾಸ್ತ್ರವು ಸಾಂಖ್ಯಯೋಗಾದಿ ತತ್ವಗಳನ್ನು ನಿರೂಪಿಸುವ ಶಾಸ್ತ್ರ. ಮೋಕ್ಷ ಧರ್ಮ ಮತ್ತು ಭಾಗವತ ಧರ್ಮವನ್ನೂ ಎಲ್ಲರೂ ಅನುಸರಿಸಬಹುದು. ಭಾಗವತ ಧರ್ಮವು ಬಹು ಶ್ರೇಷ್ಠವಾದುದು. ಇದನ್ನು ಕೃತಯುಗದಿಂದ ಮೋಕ್ಷಾವಲಂಬಿಗಳು ಅನುಷ್ಠಾನವಲ್ಲಿಟ್ಟುಕೊಂಡಿರುತ್ತಾರೆ. ದ್ವಾದಶಾಕ್ಷರ ಮಂತ್ರವನ್ನು ತಿಳಿದುಕೊಂಡು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಮತ್ತು ಅನಿರುದ್ಧರೆಂಬ ಚತುರ್ವ್ಯೂಹವನ್ನು ತಿಳಿದು ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ ಎಂಬ ಪಂಚಕಾಲಗಳಲ್ಲಿ ಭಗವಂತನ ಕೈಂಕರ್ಯ (Service) ದಲ್ಲಿ ನಿರತರಾಗುವರು ಭಾಗವತರು. ಇವರು ವಾಸುದೇವ ಶ್ರೀಕೃಷ್ಣನನ್ನು ಉಪಾಸನೆ ಮಾಡಿಕೊಂಡು ಸಾತ್ವತರೆನಿಸಿಕೊಳ್ಳುತ್ತಾರೆ.

ವಾಸುದೇವ ಶ್ರೀಕೃಷ್ಣನ ವೈಭವವನ್ನು ಪೂಜಿಸುವವನು ಪಂಚ ಸಂಸ್ಕಾರವನ್ನು ಹೊಂದಿ ಭಾಗವತನೆನಿಸಿಕೊಂಡು, ಶ್ರೀಹರಿ ಪೂಜೆಗೆ ಅರ್ಹನಾಗುತ್ತಾನೆ. ಪಂಚಸಂಸ್ಕಾರವೆಂದರೆ (ತಾಪಃ) ಸಮಾಶ್ರಯಣ ಮಾಡಿಸಿಕೊಳ್ಳುವುದು (ಶಂಖ ಚಕ್ರ ಮುದ್ರೆಗಳನ್ನು ಎರಡೂ ಭುಜಗಳ ಮೇಲೆ ಧರಿಸುವುದು), ತನ್ನ ತಿರುನಾಮವು ನಾರಾಯಣ ಸಂಬಂಧವಾಗಿರುವುದು. ಊರ್ಧ್ವ ಪುಂಡ್ರಧಾರಣೆ ಮಾಡಿಕೊಳ್ಳುವುದು, ಭಗವದಾರಾಧನೆ ಮಾಡುತ್ತಾ ತಿರುಮಂತ್ರೋಚ್ಚಾರಣೆ ಮಾಡುವುದು -- ಈ ಐದು ಪಂಚ ಸಂಸ್ಕಾರವೆನ್ನಿಸಿಕೊಳ್ಳುತ್ತವೆ.

“ಸತ್” ಶಬ್ದವಾಚ್ಯನು ಪರಬ್ರಹ್ಮನು, ಪರಬ್ರಹ್ಮನನ್ನು ಬೋಧಿಸುವ ಶಾಸ್ತ್ರಕ್ಕೆ ಸಾತ್ವತ ಶಾಸ್ತ್ರವೆಂದೂ ಹೆಸರು. ಇದನ್ನು ಅನುಸರಿಸುವವರು ಸಾತ್ವತರು. ಈ ಸಾತ್ವತ ಶಬ್ದವು ಕಾಲಕ್ರಮದಲ್ಲಿ ಶಾತ್ತಾದ ಎಂದಾಗಿದೆ. ಸಾತ್ವತರು ಮಹಾ ವಿಷ್ಣುವನ್ನು ಪೂಜಿಸುತ್ತಾರೆ. ಮಹಾವಿಷ್ಣುವಿನ ಸ್ವರೂಪವನ್ನು ತಿಳಿಸುವ ಶಾಸ್ತ್ರಕ್ಕೆ ವೈಷ್ಣವ ಶಾಸ್ತ್ರವೆಂದೂ ಹೆಸರಿದೆ. ಈ ಶಾಸ್ತ್ರವೇ ಪಾಂಚರಾತ್ರ ಶಾಸ್ತ್ರ, ಭಗವಂತನಿಂದ ಹೇಳಲ್ಪಟ್ಟ ಈ ಶಾಸ್ತ್ರವನ್ನು ಸ್ತ್ರೀ ಬಾಲಾದಿ ಎಲ್ಲಾ ವರ್ಣದವರೂ ಆಚರಿಸಬಹುದು. ಇದು ಮುಕ್ತಿ ಮಾರ್ಗ ಬೋಧಿಸುವ ಶಾಸ್ತ್ರ. ಈ ಮಾರ್ಗಾವಲಂಬಿಗಳಿಗೆ ಸೂರಿ, ಸುಹೃತ್, ಭಾಗವತ, ಪಂಚಕಾಲವಿತ್ ಪಾಂಚರಾತ್ರಿಕ ಎಂಬುದಾಗಿ ಹೆಸರುಗಳುಂಟು, ಮೋಕ್ಷ ಮಾರ್ಗವನ್ನು ಸುಲಭವಾಗಿ ತಿಳಿಸುವುದೇ ಪಾಂಚರಾತ್ರ ಇದನ್ನು ಬಿಟ್ಟರೆ ಮೋಕ್ಷಮಾರ್ಗವನ್ನು ತಿಳಿಸುವ ಯಾವ ಶಾಸ್ತ್ರವೂ ಇಲ್ಲ. ಇದರಿಂದಾಗಿ ಈ ಶಾಸ್ತ್ರವನ್ನು ಏಕಾಯನ ಶಾಸ್ತ್ರ ಎಂದೂ ಕರೆಯುವುದುಂಟು. ಈ ಶಾಸ್ತ್ರದಲ್ಲಿ ಭಗವದಾರಾಧನ ತಿಳಿಸಿದೆ. ವೇದದಲ್ಲಿ ಜ್ಞಾನಕಾಂಡ ಕರ್ಮಕಾಂಡಗಳಲ್ಲಿ ನಿರೂಪಿತವಾದ ಮೋಕ್ಷಮಾರ್ಗವನ್ನು ಪಾಂಚರಾತ್ರ ಶಾಸ್ತ್ರವು ತಿಳಿಸುತ್ತದೆ. ಇದರಿಂದ ವೈಕುಂಠದಲ್ಲಿ ನಿತ್ಯಸೂರಿಗಳು ಎಲ್ಲಾ ವೇಳೆಯಲ್ಲೂ ಭಕ್ತಿಯಿಂದ ಭಗವಂತನನ್ನು ಪೂಜಿಸುತ್ತಾರೆ. ಈ ಶಾಸ್ತ್ರದಲ್ಲಿ ಸ್ವರ ನಿಯಮವಿಲ್ಲ. “ಸತ್” ಶಬ್ದವಾಚ್ಯನಾದ ಪರಬ್ರಹ್ಮನನ್ನು ಆಶ್ರಯಿಸಿ ಅವನ ದಾಸನಾಗಿರುವವನು ಶಾತ್ತಾದನು (ಸಾತ್ವತನು) ಅಂದರೆ ಕರ್ಮ ಸನ್ಯಾಸಿ. ಇವರು ಪರಮ ನಿಷ್ಠಾವಂತರಾದ ಭಾಗವತರು. ಷಡ್ಗುಣ ಸಂಪನ್ನರಾದ ವೈಷ್ಣವರು. ಅಂದರೆ ಶ್ರೀ (ಷಡ್ಗುಣಗಳುಳ್ಳ) ವೈಷ್ಣವರು.

ಪಾಂಚರಾತ್ರ ಶಾಸ್ತ್ರವು ಪ್ರಕೃತಿ ಧರ್ಮವೂ ಹೌದು. ವಾಸುದೇವನನ್ನೇ ಪ್ರತಿಪಾದಿಸುವ.ಪಾಂಚರಾತ್ರ ಜಗತ್ತಿನ ಹಿತವನ್ನು ಪ್ರತಿಪಾದಿಸುವುದು. ಆದ್ದರಿಂದ ಇದು ಪ್ರಕೃತಿ ಧರ್ಮ. ಮೇಲೆ ತಿಳಿಸಿದಂತೆ ಇದನ್ನು ಏಕಾಂತ ಧರ್ಮವೆಂದಾಗಿ ಪಾಂಚರಾತ್ರಿಗಳು ಅಥವ ಸಾತ್ವತರು ತಿಳಿಯುವರು. ಭಗವಂತನು ಏಕಾಂತಿಗಳನ್ನು ಪ್ರೀತಿಸುತ್ತಾನೆ. ಈ ಧರ್ಮವನ್ನು ಸೃಷ್ಟಿಯ ಆದಿಯಲ್ಲಿ ಶ್ರೀಮನ್ನಾರಾಯಣನು ತನ್ನ ಮನಸ್ಸಿನಿಂದ ಜನ್ಮವೆತ್ತಿದ ಬ್ರಹ್ಮನಿಗೆ ಬೋಧಿಸಿದ್ದನು. ಬ್ರಹ್ಮನು ರುದ್ರನಿಗೆ ಬೋಧಿಸಿದನು. ರುದ್ರನು ವಾಲಖಿಲ್ಯರಿಗೆ ಬೋಧಿಸಿದನು. ಬ್ರಹ್ಮನು ನಾರಾಯಣನ ವಾಕ್ ಶಕ್ತಿಯಿಂದ ಜನ್ಮಪಡೆದು ಶ್ರೀಮನ್ನಾರಾಯಣನಿಂದಲೇ ಈ ಧರ್ಮವನ್ನು ತಿಳಿದುಕೊಂಡನು. ಈ ಧರ್ಮವು ಅನೇಕ ಬಾರಿ ಕಾಲಗರ್ಭದಲ್ಲಿ ಲುಪ್ತವಾಗಿ ಬ್ರಹ್ಮನು ನಾರಾಯಣನ ನಾಭಿ ಕಮಲದಲ್ಲಿ ಜನ್ಮಪಡೆದು ಮತ್ತೆ ಈ ಧರ್ಮವನ್ನು ತಿಳಿದುಕೊಂಡನು. ಅದನ್ನು ಆದಿತ್ಯನಿಗೂ, ಆದಿತ್ಯನು ವಿವಸ್ವನಿಗೂ, ಸೂರ್ಯನು ಮನುವಿಗೂ, ಮನುವು ಇಕ್ಷ್ವಾಕುವಿಗೂ, ಉಪದೇಶಿಸಲು ಕಾಲಾಂತರದಲ್ಲಿ ಮತ್ತೆ ಲುಪ್ತವಾಯಿತು. ಕೃತಯುಗದಲ್ಲಿ ಪ್ರಚಾರದಲ್ಲಿದ್ದ ಸಾತ್ವತ ಶಾಸ್ತ್ರವು ತ್ರೇತಾಯುಗದಲ್ಲಿ ಕಡಮೆಯಾಯಿತು. ಕೊನೆಗೆ ದ್ವಾಪರಯುಗದಲ್ಲಿ ಪ್ರಯೋಗದಲ್ಲಿಲ್ಲವಾಯಿತು. ಜನರು ಮೋಕ್ಷಪ್ರಧಾನವಾದ ಪರಬ್ರಹ್ಮ ವಾಸುದೇವನನ್ನು ಬಿಟ್ಟು

---ಕೆ. ಎನ್. ಮುತ್ತುರಾಜು.

# ತಿ. ತಿ. ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### *ಕನ್ನಡ :*

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) --ವಿ. ಬಾದರಾಯಣ ಮೂರ್ತಿ 12--50
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) --ಬನ್ನಂಜೆ ಗೋವಿಂದಾಚಾರ್ಯ 7--00
ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 3--75
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 2--25
ಸ್ತೋತ್ರ ಕುಸುಮಮಾಲಾ --ಸಂ. ವೆಂಕಟಾಚಲ 3--00
ಆಚಾರಗಳು ಆಡಂಬರಗಳು --ಕೆ. ಚಂದ್ರಮೌಳಿ 0--40
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0--50
" " (ಕನ್ನಡ ಲಿಪಿಯಲ್ಲಿ) 0--12

### *ಮಕ್ಕಳಿಗಾಗಿ :*

ಶ್ರೀಪಾದರಾಜರು --ಎಂ. ಎಸ್. ಗುಂಡೂರಾವ್ 0--75
ಮಹಿಪತಿದಾಸರು --ಶಾನಭಾಗ 0--85
ಪ್ರಸನ್ನ ವೆಂಕಟದಾಸರು --ವಿ. ಬಾದರಾಯಣಮೂರ್ತಿ 0--80
ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### *ಹಿಂದಿ :*

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ --ಡಾ. ಎಂ. ಸಂಗಮೇಶಂ 0--20
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11--00
ತೀರ್ಥರಾಜ ತಿರುಪತಿ --ಡಾ. ಎಂ. ಸಂಗಮೇಶಂ 1--50

### *ಸಂಸ್ಕೃತ :*

ಶ್ರೀ ವೇಂಕಟೇಶ್ವರ ಸುಪ್ರಭಾತಂ 0--12
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62
ಕಠೋಪನಿಷತ್ --ಡಾ. ಕೆ. ಸಿ. ವರದಾಚಾರಿ ಹಾಗೂ --ಡಾ. ಡಿ. ತಾತಾಚಾರ್ಯ 15--00
ಮಾರ್ಕಂಡೇಯ ಸಂಹಿತಾ 18--00
ತತ್ತ್ವಸಂಖ್ಯಾನಂ -- ಆರ್. ರಾಮಮೂರ್ತಿ ಶರ್ಮಾ 2--00
ಬ್ರಹ್ಮಸೂತ್ರ ಭಾಷ್ಯ (ಭಾಗ--೧) -- ಆರ್. ರಾಮಮೂರ್ತಿ ಶರ್ಮಾ 30--00
ಅಲಂಕಾರ ಸಂಗ್ರಹ -- ಸಂ--ಕೆ. ಭಾಸ್ಕರರಾವ್ 16--00
ಸೀತಾರಾಮಾಂಜನೇಯಂ --ಡಾ. ಡಿ. ಅರ್ಕಸೋಮಯಾಜಿ 50--00
ಪ್ರಶ್ನೋಪನಿಷತ್ 11--00
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ --ಸಂ--ಡಾ. ಎಸ್. ಬಿ. ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ.ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂ.ಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

***ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,***

**ತಿ. ತಿ. ದೇ. ತಿರುಪತಿ.**

ಅಲ್ಪ ಸುಖಕ್ಕಾಗಿ ಬೇರೆ ಬೇರೆ ದೇವತೆಗಳನ್ನು ಉಪಾಸನೆ ಮಾಡಲಾರಂಭಿಸಿದರು. ಇಹಲೋಕದ ಸುಖಕ್ಕಾಗಿ ಯಜ್ಞಯಾಗಾದಿಗಳನ್ನು ಮಾಡಲಾರಂಭಿಸಿದರು. ದ್ವಾಪರಾಂತದಲ್ಲಿ ಕಂಸನೇ ಮೊದಲಾದವರು ಹುಟ್ಟಿ ಉಪದ್ರವಗಳು ಹೆಚ್ಚಾಯಿತು. ಪ್ರಪಂಚದಲ್ಲಿ ಉತ್ಪಾತಗಳು ಕಂಡುಬಂದವು. ಕಲಿಯುಗದ ಪ್ರಾರಂಭದಲ್ಲಿ ಮತ್ತೆ ಏಕಾಯನ ಶಾಸ್ತ್ರವು ವೇದವೆನಿಸಿಕೊಂಡು ಸಂಕರ್ಷಣನಿಂದ ಉಪದೇಶವಾಯಿತು.

ಧರ್ಮಸಂಸ್ಥಾಪನೆಗಾಗಿ ಭಗವಂತನು ಭೂಲೋಕದಲ್ಲಿ ಅವತರಿಸಿದನು ಮತ್ತು ತನ್ನ ಅಂಶಗಳಿಂದ ಲೋಕದಲ್ಲಿ ಮಹಾಪುರುಷರು ಅವತರಿಸುವಂತೆ ಆಜ್ಞಾಪಿಸಿದನು. ಹೀಗೆ ಆಜ್ಞಾಪಿಸಿ ಅವರಿಗೆ ತನ್ನ ಅರ್ಚಾಮೂರ್ತಿಗಳನ್ನು ಆರಾಧಿಸುವಂತೆ ತಿಳಿಸಿದನು. ಭಗವಂತನ ಆಜ್ಞಾಪಾಲಕರಾದ ಚಕ್ರ, ಶಂಖ, ಗದಾನಂದಕ, ಶಾರ್ಙ್ಗರು ಭೂಲೋಕದಲ್ಲಿ ಅವತರಿಸಿ ಬ್ರಹ್ಮನ ಬಳಿಗೆ ಹೋಗಿ ಶರಣಾಗತರಾಗಿ ಏಕಾಯನ ಶಾಸ್ತ್ರವನ್ನು ಉಪದೇಶಮಾಡಲು ಪ್ರಾರ್ಥಿಸಿದರು. ಬ್ರಹ್ಮನು ಪಾಂಚರಾತ್ರ ಶಾಸ್ತ್ರವನ್ನು ಬೋಧಿಸಿದನು. ಈರೀತಿ ಬೋಧಿಸಿದ ಬೋಧನೆಯಲ್ಲಿ ಭಗವದ್ಧ್ಯಾನ, ಭಗವದಾರಾಧನೆಗಳನ್ನು ಮನೆಗಳಲ್ಲೂ ದೇವಾಲಯಗಳಲ್ಲೂ ಪಂಚಕಾಲದಲ್ಲಿ ಆಚರಿಸಬೇಕೆಂದು ಹೇಳಿ ಮೋಕ್ಷಪ್ರಧಾನವಾದ ಮಾರ್ಗವನ್ನು ತಿಳಿಸಿದನು.

ಇವರು ಪಂಚ ಬ್ರಹ್ಮರ್ಷಿಗಳು. ಬ್ರಹ್ಮನ ಆಜ್ಞೆಯನ್ನು ಶಿರಸಾವಹಿಸಿ ಶ್ರೀಕೃಷ್ಣ ಪರಮಾತ್ಮನ ಬಳಿ ಬಂದು ವಿಷ್ಣುವಿನ ಆರಾಧನಾ ಕ್ರಮವನ್ನು ತಿಳಿಸಬೇಕೆಂದು ಪ್ರಾರ್ಥಿಸಿದರು. ಶ್ರೀಕೃಷ್ಣನು ಒಂದು ಸಭೆ ಸೇರಿಸಿ ಐದು ದಿನಗಳ ಕಾಲ ನಡೆಸಿ ಒಂದೊಂದು ದಿನದಲ್ಲಿ ಬ್ರಹ್ಮರ್ಷಿಗಳಾದ ಔಪಗಾಯನ, ಶಾಂಡಿಲ್ಯ, ಭರದ್ವಾಜ, ಕೌಶಿಕ, ಮತ್ತು ಮೌಂಜಾಯನರಿಗೆ ಒಬ್ಬೊಬ್ಬರಿಗೆ ಒಂದೊಂದು ದಿವಸ ಏಕಾಯನ ವೇದವನ್ನು ಅಧಿಕಾರವಾಣಿಯಿಂದ ಉಪದೇಶಿಸಿದರು. ಭಗವಂತನ ಪಂಚಾಯುಧ ಅಂಶಭೂತರಾದ (ಚಕ್ರ, ಶಂಖ, ಗದಾ, ಖಡ್ಗ, ಚಾಪ) ಶಾಂಡಿಲ್ಯ, ಔಪಗಾಯನ, ಕೌಶಿಕ ಮತ್ತು ಭರದ್ವಾಜ ಮೌಂಜಾಯನರೆಂಬ ಇವರು ಋಷಿಗಳಿಗೆ ಭಗವಂತನು ಒಂದೊಂದು ದಿವಸ ಒಬ್ಬೊಬ್ಬರಿಗೆ ಉಪದೇಶಿಸಿದುದರಿಂದ ಈ ಶಾಸ್ತ್ರಕ್ಕೆ ಪಾಂಚರಾತ್ರವೆಂದು ಹೆಸರಾಯಿತು. ಈ ಶಾಸ್ತ್ರವು ಪುರಾಣ ವೇದ ವೇದಾಂತ, ಸಾಂಖ್ಯ ಮತ್ತು ಯೋಗ ಈ ಐದು ಶಾಸ್ತ್ರಗಳ ಹಿರಿಮೆಯು ರಾತ್ರಿಯಂತೆ, ಕಾಣುತ್ತಾದುದರಿಂದ ಇದು ಪಾಂಚರಾತ್ರವೆಂದೂ ಹೆಸರಾಯಿತು. ಅದೂ ಅಲ್ಲದೆ ಅನಂತ, ಗರುಡ, ವಿಷ್ವಕ್ಸೇನ, ರುದ್ರ, ಬ್ರಹ್ಮ ಈ ಐವರೂ ಭಗವಂತನಿಂದ ಒಂದೊಂದು ರಾತ್ರಿಯಲ್ಲಿ ತಿಳಿದುಕೊಂಡರು. ಆದ್ದರಿಂದಲೂ ಇದನ್ನು ಪಂಚರಾತ್ರವೆಂದೂ ಕರೆಯಲಾಯಿತು.

ಸಾಂಖ್ಯ (ತತ್ವಶಾಸ್ತ್ರ) ಯೋಗ, ವೈರಾಗ್ಯ, ತಪಸ್ಸು ಭಗವದ್ಭಕ್ತಿಗಳನ್ನು ಬಹಳವಾಗಿ ಬೋಧಿಸಿ ಕಾಪಾಡುವುದರಿಂದ ಇದನ್ನು ಪಾಂಚರಾತ್ರವೆಂದೂ ಕರೆಯಲಾಯಿತು. ಪಂಚೇಂದ್ರಿಯಗಳನ್ನು ರಾತ್ರಿಯಂತೆ ಪರಿಗಣಿಸಲಾಗಿದೆ. ಅಂದರೆ ಬಾಹ್ಯ ಪ್ರಪಂಚದ ಅರಿವುಗಳನ್ನು ಶಬ್ದ, ಸ್ಪರ್ಶ, ರೂಪ, ರಸ, ಗಂಧ ನಾಶಪಡಿಸುವುದರಿಂದ ಅಂದರೆ ವಿಷಯ ಸುಖಗಳಿಂದ ದೂರಮಾಡುವುದರಿಂದ ಪಾಂಚರಾತ್ರವೆಂದೂ ಹೆಸರಿದೆ.

ಭಗವಂತನು ಪರ, ವ್ಯೂಹ, ವಿಭವ, ಅರ್ಚಾ, ಅಂತರ್ಯಾಮಿತ್ವ ಸ್ವರೂಪಗಳನ್ನು ನಿರೂಪಿಸಿ ಮೋಕ್ಷಮಾರ್ಗಕ್ಕೆ ಸಹಾಯಕವಾಗಿರುವ ಈ ಶಾಸ್ತ್ರ ಪಂಚರಾತ್ರವೆಂದೂ ಕರೆಯಲ್ಪಟ್ಟಿದೆ. ಈ ರೀತಿ ನಾನಾ ವಿಧವಾದ ಕಾರಣಗಳಿಂದ ಏಕಾಯನ ಶಾಸ್ತ್ರವು ಪಾಂಚರಾತ್ರವೆಂದು ಪ್ರಸಿದ್ಧವಾಗಿದೆ. ಭಗವಂತನು ದುಃಖದಿಂದ ಚೇತನರನ್ನು ಉದ್ಧರಿಸಲು ಪಂಚಕಾಲಗಳಲ್ಲಿ ಮಾಡುವ ಕ್ರಿಯೆಗಳನ್ನು ಪ್ರತಿಪಾದಿಸುವ ವೇದವೆಂದು ಪ್ರಸಿದ್ಧವಾದ ಪಾಂಚರಾತ್ರ ಶಾಸ್ತ್ರವನ್ನು ಭಗವಂತನು ಬೋಧಿಸುವುದರಿಂದ ಆತನು ಪ್ರಥಮಗುರುವಾಗಿ ಪರಿಗಣಿಸಲ್ಪಟ್ಟಿದ್ದಾನೆ. ಆದ್ದರಿಂದ ಪಾಂಚರಾತ್ರ ಶಾಸ್ತ್ರವು ಪೂಜ್ಯವಾಗಿದೆ. ಪಂಚಕಾಲ ವ್ಯವಸ್ಥೆ ಇರುವುದರಿಂದ ಇದನ್ನು ಪಾಂಚರಾತ್ರವೆಂಬುದು ಒಂದು ಸಾರ್ಥಕವಾದ ಹೆಸರೆಂದು ಆಚಾರ್ಯರುಗಳು ಪರಿಗಣಿಸಿದ್ದಾರೆ. ಅಭಿಗಮನ ಉಪಾದಾನ, ಇಜ್ಯಾ, ಸ್ವಾಧ್ಯಾಯ, ಮತ್ತು ಯೋಗ ಈ ಐದು ಪಂಚಕಾಲ ಕ್ರಿಯೆಗಳು.

ಅಭಿಗಮನವೆಂದರೆ ಬೆಳಗಿದರೂವ ಸುಮಾರು ಬೆಳಗ್ಗೆ ನಾಲ್ಕುವರೆ ಗಂಟೆಗೆ ಎದ್ದು ಶೌಚಾದಿಗಳನ್ನು ಮುಗಿಸಿ, ಸ್ನಾನ, ಸಂಧ್ಯ ಜಪಗಳನ್ನು ತ್ರಿಕರಣ ಶುದ್ಧಿಯಿಂದ ನಡೆಸುವುದು.

ಉಪಾದಾನ ಎರಡನೆಯ ಪ್ರಹರ ಅಂದರೆ ಬೆಳಗ್ಗೆ ೯--೦೦ಗಂಟೆ ಯಿಂದ ೧೨ ಗಂಟೆಯವರೆಗೆ ಭಗವದಾರಾಧನಕ್ಕೆ ಅವಶ್ಯಕವಾದ ಪುಷ್ಪ, ಫಲ, ಮೊದಲಾದುವುಗಳನ್ನು ಸಂಗ್ರಹಿಸುವುದು.

ಇಜ್ಯಾ : ಮೂರನೆಯ ಪ್ರಹರದಲ್ಲಿ ಮಧ್ಯಾಹ್ನ ೧೨ ಗಂಟೆಯಿಂದ ಭಗವದಾರಾಧನೆಗೆ ತಂದ ಪದಾರ್ಥಗಳಿಂದ ಭಗವದಾರಾಧನೆ ಮಾಡುವುದು.

ಸ್ವಾಧ್ಯಾಯ : ನಾಲ್ಕನೆಯ ಪ್ರಹರದಲ್ಲಿ ಪವಿತ್ರ ಗ್ರಂಥಗಳನ್ನು ಪರಿಶೀಲಿಸುವುದು, ಪ್ರವಚನಗಳನ್ನು ಶ್ರವಣ ಮಾಡುವುದು, ಚಿಂತಿಸುವುದು, ಅಧ್ಯಯನ ವ್ಯಾಖ್ಯಾನ ಮತ್ತು ಪಾಠ ಪ್ರವಚನಗಳನ್ನು ನಡೆಸುವುದು.

ಯೋಗ : ರಾತ್ರಿ ಮತ್ತೆ ಭಗವತ್ಪೂಜೆ ಮಾಡಿ ಪ್ರಾಣಾಯಾಮ ಮತ್ತು ಧ್ಯಾನಾದಿ ಅಷ್ಟಾಂಗ ಯೋಗವನ್ನು ಅಭ್ಯಾಸ ಮಾಡಿ ವಿಶ್ರಾಂತಿ ಪಡೆಯುವುದು -- ಇವೇ ಪಂಚಕಾಲಗಳು.

ಪಾಂಚರಾತ್ರ ಆಗಮವು ಶುದ್ಧ ಹಿತದಿಂದ ಶಾಸ್ತ್ರ ಸುಲಭವಾಗಿ ಮೋಕ್ಷಧರ್ಮವನ್ನು ಸೂಚಿಸುವುದೂ ಆಗಿದೆ. ಮನುಷ್ಯರಲ್ಲಿ ಬ್ರಹ್ಮ ವೇತ್ತನಂತೆಯೂ, ಮೊಸರಿನಲ್ಲಿ ಬೆಣ್ಣೆಯಂತೆಯೂ, ಔಷಧಿಗಳಲ್ಲಿ ಅಮೃತದಂತೆಯೂ ಶೋಭಿಸುವ ಶಾಸ್ತ್ರ, ಯೋಗಿಗಳು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವಂತಹ ಮಾರ್ಗ ಬಲ, ವೀರ್ಯ, ತೇಜಸ್ಸು, ಜ್ಞಾನ, ಐಶ್ವರ್ಯ ಮತ್ತು ಶಕ್ತಿಗಳುಳ್ಳ ಆರು ಗುಣಗಳಿಂದ ಕೂಡಿದ ವಿಷ್ಣುವನ್ನು ಭಗವಂತನೆಂದು ಪ್ರಾಂಚರಾತ್ರ ಶಾಸ್ತ್ರದಲ್ಲಿ ಪರಿಗಣಿಸಲ್ಪಟ್ಟಿದೆ. ಮೋಕ್ಷಾರ್ಥಿಯಾದವನು ವಿಷ್ಣುವಾದ ವಾಸುದೇವನನ್ನು ಓಂಕಾರ ಸ್ವರೂಪನೆಂದು ತಿಳಿದು ಪೂಜಿಸುತ್ತಾನೆ. ಪಾಂಚರಾತ್ರ ವಿಧಿ ವೇದವಿಧಿ, ಭಕ್ತಿ ಯಜ್ಞ (ಪೂಜೆ) ಗಳಿಂದ ಮಾತ್ರ ವಾಸುದೇವನನ್ನು ಪಡೆಯಬಹುದೇ ಹೊರತು ಅನ್ಯಥಾ ಇಲ್ಲ. ಪಾಂಚರಾತ್ರ ಶಾಸ್ತ್ರವನ್ನು ಅವಲಂಬಿಸಿರುವವನು ಶ್ರೀ ಮಹಾವಿಷ್ಣುವಿನ ಭಕ್ತನಾಗುತ್ತಾನೆ. ಈ ಒಂದು ಶಾಸ್ತ್ರದಿಂದಲೇ ವಿಷ್ಣುವನ್ನು ತಿಳಿಯಲು ಸಾಧ್ಯವಾಗುವುದು. ಪಾಂಚರಾತ್ರ ನಿಷ್ಠರೇ ಭಾಗವತರು ಎನ್ನಿಸಿಕೊಳ್ಳುವುದು.

ಯಾವುದಾದರೂ ವಿಷಯದ ಬಗ್ಗೆ ಅಂತಿಮವಾದ ನಿಶ್ಚಯವಾದ ತೀರ್ಮಾನವೇ "ಸಿದ್ಧಾಂತ" ಪಾಂಚರಾತ್ರ ಆಗಮವು ಅಂತಿಮವಾಗಿ ನಿರ್ಧರಿಸುವ ಶಾಸ್ತ್ರ, ಬೇರೆ ಯಾವ ಶಾಸ್ತ್ರವೇ ಆಗಲಿ ಅವುಗಳಿಗೆ ಅಂತಿಮವಾದ ನಿಶ್ಚಿತವಿರುವುದಿಲ್ಲ. ಜನ್ಮಾಂತರಗಳಲ್ಲಿ ಅನೇಕ ವೇದವೇದಾಂತಗಳಲ್ಲಿ ಸಾಧಿಸಿ ಸಿದ್ಧಿಯನ್ನು ಪಡೆದರೂ ಕೊನೆಗೆ ಪಾಂಚರಾತ್ರದಲ್ಲಿ ಪೂರ್ಣವಾಗಿ ನಂಬಿಕೆ ಬರುತ್ತದೆ. ಪರಮ ಪದ ಪ್ರಾಪ್ತಿಯು ಈ ಶಾಸ್ತ್ರಾಭ್ಯಾಸದಿಂದಲೇ ಆಗುವುದು. ಆದ್ದರಿಂದ ಇದನ್ನು ಸಿದ್ಧಾಂತವೆಂದು ಹೇಳಿರುವುದು. ಈ ಶಾಸ್ತ್ರವು ಮಹೋಪನಿಷತ್, ಮೀಮಾಂಸಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡುವವನೇ ಈ ಶಾಸ್ತ್ರವನ್ನು ಅಧ್ಯಯನ ಮಾಡುವುದಕ್ಕೆ ಅರ್ಹತೆ ಪಡೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಯುತ್ತಾನೆ. ಈ ಶಾಸ್ತ್ರದ ಪ್ರಕಾರ ವಾಸುದೇವನೇ ಪರಬ್ರಹ್ಮನು.

ದೇವರ ಪೂಜೆಯನ್ನು ಆಶಾರಹಿತರೂ ಕರ್ಮ ಸನ್ಯಾಸಿಗಳೂ ನಡೆಸದೇಕು. ಪಂಚಕಾಲ ಪರಾಯಣರಾಗಿ ಚಾತುರ್ವರ್ಣ್ಯದವರೂ ನಡೆಸಬಹುದು. ಇವರಿಗೆ ಪೂಜೆ ಮತ್ತು ಸ್ವಾಧ್ಯಾಯ ಜಪ ಕರ್ಮಗಳಿಗಾಗಿ ವೇದ ಮಂತ್ರಗಳಾಗಲಿ ಗಾಯತ್ರಿಯಾಗಲಿ ಇಲ್ಲ. ಕೇವಲ ದ್ವಾದಶಾಕ್ಷರ ಮಂತ್ರಗಳಿಂದ ಸಮಸ್ತ ಕರ್ಮಗಳೂ ನಡೆಯಬೇಕು. ಯಾವ ವರ್ಣದವರೇ ಆಗಲಿ ಏಕಾಯನ ದೀಕ್ಷೆ ಪಡೆದ ಮೇಲೆ ಎಲ್ಲರೂ ಸಮಾನರು, ಜಾತಿ ಬೇಧವಾಗಲಿ, ಮೇಲು ಕೀಳು ಎಂಬ ವ್ಯತ್ಯಾಸವಾಗಲಿ ಇರದು. ಇವರೆಲ್ಲ ಫಲಾಪೇಕ್ಷೆ ಬಿಟ್ಟು ಮೋಕ್ಷವನ್ನು ಮಾತ್ರ ಧ್ಯೇಯವಾಗಿಟ್ಟುಕೊಂಡಿರುವವರು. ಇವರು ದ್ವಾದಶಾಕ್ಷರ ಚಿಂತಕರಾಗಿರುತ್ತಾರೆ. ಇವರಿಗೆ ಅಶೌಚಗಳು ಅಂಟುವುದಿಲ್ಲ. ಇವರು ಪೂರ್ವ ವರ್ಗಾಶ್ರಮಗಳ ಆಚಾರಗಳನ್ನೂ ನಡೆಸಬೇಕು. ಭಗವದಾರಾಧನೆ, ಸ್ವಾಧ್ಯಾಯ ಮತ್ತು ದ್ವಾದಶಾಕ್ಷರ ಮಂತ್ರವನ್ನು ಜಪಿಸಬೇಕು. ಮೋಕ್ಷಾಭಿಲಾಷೆಯುಳ್ಳವರಾಗಿದ್ದರೂ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡಬಾರದು. ಕರ್ತವ್ಯ ದೃಷ್ಟಿಯಿಂದ ದೀಕ್ಷಿತರಲ್ಲದಿದ್ದರೂ ಪೂಜೆ ಮಾಡಬಹುದು. ಕರ್ಮಸನ್ಯಾಸಿಗಳು ಕಾಷಾಯಧರರಾಗಬೇಕಾಗಿಲ್ಲ, ಗೃಹಸ್ಥರೇ ಆಗಿರಬಹುದು.

ಆಗಮ ಶಾಸ್ತ್ರ ಸಿದ್ಧಾಂತ ಪ್ರಕಾರ ಎರಡು ವಿಧದ ಜನರಿಗೆ ಪೂಜೆ ಮಾಡಲು ಅಧಿಕಾರವುಂಟು. ದೀಕ್ಷೆ ಪಡೆದ ಚಾತುರ್ವರ್ಣವವರಿಗೆ ಅಧಿಕಾರವುಂಟು. ಈ ದೀಕ್ಷೆ ಭಾಗವರ್ಧಿನಿ ಮೌದ್ಗಲಿ ಎಂಬುವುಗಳು. ಆದರೆ ಈ ದೀಕ್ಷೆಗಳು ಈಗ ಮರೆತುಹೋಗಿ ಅನುಷ್ಠಾನದಲ್ಲಿಲ್ಲ, ಎರಡನೆಯವರು ಕರ್ಮ ಸನ್ಯಾಸಿಗಳು. ಅಂದರೆ ಇಹ ಸುಖಾದಿಗಳನ್ನು ತ್ಯಜಿಸಿ ಜ್ಞಾನ ನಿಷ್ಠರಾಗಿ ಮೋಕ್ಷಫಲ ಸಾಧನೆಯಲ್ಲಿ ನಿರತರಾದವರು. ಇವರಿಗೆ ದೀಕ್ಷೆಯ ಅವಶ್ಯಕತೆ ಇಲ್ಲ. ಮೋಕ್ಷಸಾಧನೆಗೆ ಸುಲಭವಾದ ಮಾರ್ಗ ಭಗವತಾರಾಧನೆ. ಇವರು ಪೂಜೆ ಮಾಡಲು ಅರ್ಹತೆಯುಳ್ಳವರಾಗಿರುತ್ತಾರೆ. ಇವರು ಈಗಲೂ ಗ್ರಾಮಾಂತರ ದೇವಾಲಯಗಳಲ್ಲಿ ಪೂಜಾದಿಗಳನ್ನು ಮಾಡುತ್ತಿದ್ದಾರೆ. ಪೂಜೆಯು ಚತುರ್ವಿಧವಾಗಿದ್ದು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಪೂಜಿಸುತ್ತಿದ್ದು ನವಮೂರ್ತಿಗೆ ಪ್ರಧಾನವಾಗಿದೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಹಯಗ್ರೀವ ವಿಷ್ಣು, ನೃಸಿಂಹ, ವರಾಹ ಈ ದೇವತೆಗಳ ಜೊತೆಗೆ ಕೇಶವಾದಿ

ಮೂರ್ತಿಗಳನ್ನೂ ಮತ್ಸ್ಯ ಕೂರ್ಮಾದಿ ಅವತಾರ ಮೂರ್ತಿಗಳನ್ನೂ ಪೂಜಿಸುತ್ತಿರಲಾಗಿದೆ.

ಭಗವದಾರಾಧನೆಯು ಎರಡು ಕಾರಣಗಳುಳ್ಳದ್ದಾಗಿದೆ. ಒಂದು ಸ್ವಾರ್ಥಕ್ಕಾಗಿ ಮಾಡುವ ಆರಾಧನೆ. ಇದನ್ನು ತಮ್ಮ ತಮ್ಮ ಮನೆಗಳಲ್ಲಿ ಮಾಡುತ್ತಾರೆ. ಲೋಕ ಕಲ್ಯಾಣಾರ್ಥವಾಗಿ ಮಾಡುವುದು ದೇವಾಲಯಗಳಲ್ಲಿ. ಆಗಮೋಕ್ತ ರೀತಿಯಲ್ಲಿ ಪ್ರತಿಷ್ಠಿತವಾಗಿರುವ ಮಂದಿರಗಳಲ್ಲಿ ವಿಧಿಪೂರ್ವಕವಾಗಿ ಮಾಡುವ ಪೂಜೆ. ವಿಷ್ಣುಪೂಜೆ ಮಾಡುವವರು ದೀಕ್ಷೆ ತೆಗೆದುಕೊಂಡಿರುತ್ತಾರೆ. ಇವರಿಗೆ ಪಂಚ ಸಂಸ್ಕಾರಗಳು ಆಗಿರುತ್ತದೆ. ಇವರೆಲ್ಲರೂ ವೈಷ್ಣವರು. ಇವರು ಗೃಹಾರ್ಚನೆಯನ್ನೂ ಮಾಡುತ್ತಾರೆ. ಆದರೆ ಲೋಕಕಲ್ಯಾಣಾರ್ಥವಾಗಿ ಮಾಡುವವರು ಭಾಗವತರೆನ್ನಿಸಿಕೊಂಡಿರುತ್ತಾರೆ. ಇವರೂ ಕೂಡ ದೀಕ್ಷೆಯನ್ನು ಪಡೆದಿರಬೇಕು.

ಆಗಮ ಸಿದ್ಧಾಂತದಲ್ಲಿ ಚತುರ್ಮೂರ್ತಿಗಳನ್ನು ಸ್ಥಾಪಿಸಿ ಸಮಾನವಾಗಿ ಪೂಜೆ ಮಾಡಬೇಕು. ಈ ಚತುರ್ಮೂರ್ತಿಗಳು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ. ಇವರುಗಳನ್ನು ಮಂದಿರಗಳಲ್ಲಿ ಯಾವ ಕ್ರಮದಲ್ಲಾದರೂ ಸ್ಥಾಪಿಸಬಹುದು. ಇವರಿಗೆ ಸಮಾನವಾದ ಪೂಜೆ ನಡೆಸಬೇಕು. ಈ ಸಿದ್ಧಾಂತದಲ್ಲಿ ಕರ್ಮನ್ಯಾಸವು ಹೇಳಿರುತ್ತದೆ. ಈ ಮೂರ್ತಿಗಳಿಗೆ ದ್ವಿಭುಜಗಳು ಮಾತ್ರ ಇದ್ದು ನೀಳವಾಗಿರಬೇಕು. ನಿರಾಯುಧರಾಗಿರಬೇಕು. ಒಂದೇ ಪೀಠದಲ್ಲಿ ಸ್ಥಾಪಿಸಲ್ಪಟ್ಟಿರಬೇಕು. ದೇವಿಗಳಿರಕೂಡದು. ಇವರೆಲ್ಲರಿಗೂ ಸಮಾನ ಪಾಡ್ಗುಣ್ಯವಿರುತ್ತದೆ. ನಿತ್ಯಪೂಜೆ ಬಲಾದಿ ಮಂತ್ರಗಳಿಂದ ನಡೆಯಬೇಕು. ಬಲಿಪ್ರದಾನವಾಗಲಿ, ನಿತ್ಯೋತ್ಸವವಾಗಲಿ, ಪವಿತ್ರೋತ್ಸವವಾಗಲಿ ಶಯನೋತ್ಸವಗಳು ಇಲ್ಲ. ಮನೆ ಮತ್ತು ಮಂದಿರಗಳಲ್ಲಿ ಉಷಃಕಾಲ ಮತ್ತು ಮಧ್ಯಾಹ್ನ ಸಮಯಗಳಲ್ಲಿ ಪಂಚಕಾಲ ಪರಾಯಣರು ಆಶಾರಹಿತರಾದ ಕರ್ಮ ಸನ್ಯಾಸಿಗಳು ಪೂಜೆ ಮಾಡಬೇಕು. ಏಕಾಯನ ಮಾರ್ಗದಲ್ಲಿ ಪಂಚಕಾಲ ಪರಾಯಣರಿಂದ ಬ್ರಾಹ್ಮಣಾದಿ ಚಾತುರ್ವರ್ಣ್ಯದವರು ಪೂಜಿಸಬಹುದು. ಇವರುಗಳಿಗೆ ಕೇವಲ ದ್ವಾದಶಾಕ್ಷರ ಮಂತ್ರದಿಂದ ಸಮಸ್ತ ಕರ್ಮಗಳೂ ನಡೆಯಲ್ಪಡಬೇಕು. ಇದಕ್ಕೆ ಬೀಜಶಕ್ತಿ ಮತ್ತು ಋಷಿ ಛಂದಸ್ಸು ಇಲ್ಲ. ಈ ಚಾತುರ್ವರ್ಣ್ಯದವರು ಬೇರೆ ಬೇರೆ ರೀತಿಯಲ್ಲಿ ದೀಕ್ಷೆ ಪಡೆಯಬೇಕು. ಇವರಿಗೆ ಉಪನಯನಾದಿಗಳು ಏಕಾಯನರೀತ್ಯಾ ಬಲಾದಿ ಮಂತ್ರಗಳಿಂದ ಮಾಡಬೇಕು. ಇವರು ಪಂಚಕಾಲ ಪರಾಯಣರಾಗಿರಬೇಕು. ಶುದ್ಧಾಚಾರ ಪರಾಯಣರಾಗಿದ್ದು, ಭಗವದಾರಾದನೆ ಸ್ವಾಧ್ಯಾಯ ಮಾಡುವವರಾಗಿ, ದ್ವಾದಶಾಕ್ಷರ ಮಂತ್ರವನ್ನು ಉಪಯೋಗಿಸಬೇಕು. ಇವರು ಮೋಕ್ಷ ಮಾರ್ಗ ನಿರತರಾಗಿರಬೇಕು. ಆದರೂ ನಿತ್ಯ ನೈಮಿತ್ತಿಕ ಕರ್ಮಗಳನ್ನು ಬಿಡದೆ ಅನುಷ್ಠಾನದಲ್ಲಿಟ್ಟುಕೊಂಡಿರಬೇಕು. ಈ ಅಧಿಕಾರವು ಕರ್ಮಸನ್ಯಾಸಿಗಳಿಗಿದೆ. ಕರ್ಮಸನ್ಯಾಸ ಎಂದರೆ ಕಾಷಾಯ ದಂಡ ಧಾರಿಗಳಾಗಿ ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸಾಶ್ರಮದಲ್ಲಿರುವವರಲ್ಲ. ಇವರು ಗೃಹಸ್ಥರು. ಸ್ವರ್ಗಾದಿ ಫಲ ಪ್ರಾಪ್ತಿಸಾಧಕವಾದ ಕಾಮ್ಯಕರ್ಮಗಳನ್ನು ಸ್ವರೂಪತಃ ತ್ಯಾಗಮಾಡಿ ಮೋಕ್ಷೈಕ ಸಾಧಕರಿಂದ ಜ್ಞಾನ ನಿಷ್ಠರು. ಇವರು ನಿತ್ಯ ನೈಮಿತ್ತಿಕ ಕರ್ಮಗಳನ್ನು ಆಚರಿಸಿಕೊಂಡಿರುತ್ತಾರೆ.

ಪಾದ್ಮಸಂಹಿತೆ ಪ್ರಕಾರ ಚಾತುರ್ವರ್ಣ್ಯದವರಿಗೂ ಪೂಜೆ ಮಾಡುವುದರಲ್ಲಿ ಅಧಿಕಾರವುಂಟು. ದೀಕ್ಷೆ ಪಡೆದವರಿಗೆ ಚಾತುರ್ವರ್ಣ್ಯದವರಲ್ಲಿ ಪರಸ್ಪರ ಯಾವ ಮೇಲು ಕೀಳು ಎಂಬ ಭೇದವೂ ಇರುವುದಿಲ್ಲ. ಇದು ಪಾದ್ಮಸಂಹಿತೆಯಲ್ಲಿ ಹೇಳಿದೆ. ಎಲ್ಲರೂ ಬ್ರಹ್ಮನಿಷ್ಠರು. ಬ್ರಹ್ಮನಿಂದ ದೀಕ್ಷೆ ಪಡೆದ ಔಪಗಾಯನಾದಿಗಳು ಭಾಗವತರು ಅಥವ ದೀಕ್ಷಿತರು ಎನ್ನಿಸಿಕೊಂಡಿರುತ್ತಾರೆ.

ಈಗಾಗಲೇ ಹಿಂದೆ ಹೇಳಿರುವಂತೆ ಸ್ವಾರ್ಥ ಯಜನ ಮತ್ತು ಪರಾರ್ಥ ಯಜನ ಎಂಬುದು ಗೃಹಾರ್ಚನೆ ಮತ್ತು ಆಲಯಾರ್ಚನೆಯೆಂದು ತಿಳಿದುಕೊಂಡಾಯಿತು. ಈ ಎರಡೂ ತರಹ ಪೂಜೆ ಮಾಡುವವರು ದೀಕ್ಷೆಪಡೆದಿರಬೇಕು. ಈ ದೀಕ್ಷೆ ಹೇಗೆ ಎನ್ನುವುದು ಏನು ಎನ್ನುವುದು ಎಲ್ಲೂ ತಿಳಿಸಿಲ್ಲ. ಇದರ ವಿವರಗಳೂ ತಿಳಿಯದು. ಆದರೆ ಮಂತ್ರಸಿದ್ಧಾಂತ ರೀತಿಯಲ್ಲಿ ದೀಕ್ಷೆಗಳು ಹೇಳಲ್ಪಟ್ಟಿವೆ. ಇದರಂತೆ ಬ್ರಾಹ್ಮಣರಿಗೆ ಮಾತ್ರ ಪರಾರ್ಥ ಯಜನ ಅಧಿಕಾರ. ಇತರರು ದೇವಾಲಯದ ಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ಶ್ರೀಮದ್ಭಾಗವತದ ಪ್ರಾಕಾರ ದೀಕ್ಷೆ ಎಂದರೆ ಯಾವುದಾದರೊಂದು ಸತ್ಕಾರ್ಯದಲ್ಲಿ ನಿರತರಾಗಿರುವುವಾಗಿ ಸಂಕಲ್ಪ ಮಾಡುವುದು. ಆ ಮಾರ್ಗದಲ್ಲಿ ನಿರತರಾಗಿರುವುದು.

ದೀಕ್ಷೆ ಪಡೆದ ಮೇಲೆ ಅವರಿಗೆ ನಾಮಕರಣ ಬೇರೆ ಇರುತ್ತದೆ. ಇವರಿಗೆ ಪಂಚ ಸಂಸ್ಕಾರವಾಗಬೇಕು. ಇವರಿಗೆ ಸ್ವಾರ್ಥ ಯಜನದಲ್ಲಿ ಅಧಿಕಾರ ಬರುತ್ತದೆ. ಪರಾರ್ಥ ಯಜನಕ್ಕೆ ಪಂಚಬ್ರಹ್ಮ ಋಷಿಗಳ ಗೋತ್ರದವರೂ, ಆಗಮಶಾಸ್ತ್ರ ವಿಶಾರದರೂ, ದೀಕ್ಷೆಪಡೆದವರೂ ಮುಖ್ಯವಾಗಿ ಅರ್ಚನೆ ಮಾಡುವುದಕ್ಕೆ ಅರ್ಹತೆಪಡೆದು ಭಾಗವತರೆನಿಸಿಕೊಳ್ಳುತ್ತಾರೆ. ಇಂತಹ ಭಾಗವತರು ಪರಾರ್ಥ ಯಜನ ಮಾಡಲು ಮೇಲೆ ತಿಳಿಸಿದ ಅಧಿಕಾರಿಗಳಿಂದ ಅಪ್ಪಣೆ ಪಡೆಯಬೇಕು. ಅಂತಹವರ ನಂತರ ಆ ಅಧಿಕಾರ ಅವರ ವಂಶಸ್ಥರಿಗೆ ಬರುವುದಿಲ್ಲ. ಅವರು ಪ್ರತ್ಯೇಕವಾಗಿ ದೀಕ್ಷೆ ಪಡೆಯಲೇಬೇಕು. ಹೀಗೆ ದೀಕ್ಷೆ ಪಡೆದು ಆ ವಾಹಿತ ದೇವರುಗಳ ಮೇಲೆ ಪುಷ್ಪವನ್ನು ಹಾಕಿದಾಗ ಆ ಪುಷ್ಪ ಯಾವ ದೇವತೆಯ ಮೇಲೆ ಬೀಳುವುದೋ ಆ ದೇವತೆಯ ಹೆಸರನ್ನು ಅವರ ಜನ್ಮನಾಮದೊಡನೆ ಸೇರಿಸಿಕೊಳ್ಳಬೇಕು. ಹೀಗೆ ಸೇರಿಸುವೆಂದು ಬ್ರಾಹ್ಮಣನಾದಲ್ಲಿ ಭಾಗವತ ಅಥವ ಭಟ್ಟ ಎಂದು, ಕ್ಷತ್ರಿಯನಾದಲ್ಲಿ ದೇವ ಎಂದೂ, ವೈಶ್ಯನಾದಲ್ಲಿ ಪಾಲ ಎಂದೂ, ಶೂದ್ರನಾದಲ್ಲಿ ದಾಸ ಎಂದೂ ಕರೆಯಲ್ಪಡುತ್ತಾರೆ.

ಸ್ತ್ರೀಯರಿಗೂ ಆಲಯದಲ್ಲಿ ಕೈಂಕರ್ಯ ಪಡೆಸಲು ಅರ್ಹತೆಯುಂಟು. ದೀಕ್ಷೆಕೊಡುವುದಕ್ಕೆ ಮುಂಚೆ ಅಭ್ಯರ್ಥಿಗೆ ಕ್ರಮವಾಗಿ ನಾಲ್ಕು ಹೆಸರುಗಳನ್ನು ಕೊಡಬೇಕು. ಮೊದಲನೆಯದಾಗಿ ಸಮಯಿ ಎಂದೂ ಎರಡನೆಯ ಹಂತದಲ್ಲಿ ಪುತ್ರಕ ಎಂದೂ ಮೂರನೆಯ ಹಂತದಲ್ಲಿ ಸಾಧಕ ಎಂದೂ ಕೊನೆಯ ಅಂದರೆ ನಾಲ್ಕನೆಯ ಹಂತದಲ್ಲಿ ದೀಕ್ಷಿತ ಎಂದೂ ಹೆಸರುಗಳನ್ನು ಕೊಡುವುದುಂಟು.

ಸಮಯಿ ಎಂದರೆ ಸಮಯವಿಧಿ. ಆಚಾರ ಮತ್ತು ಸಂಪ್ರದಾಯಗಳನ್ನು ತಿಳಿದುಕೊಳ್ಳುವವನು. ಶಾಸ್ತ್ರಗಳ ಅರ್ಥ ಮತ್ತು ಮಂತ್ರಗಳನ್ನು ತಿಳಿದುಕೊಳ್ಳುವವನು ಪುತ್ರಕ. ಇವೆರಡನ್ನೂ ಸಾಧನೆ ಮಾಡುವವನು ಸಾಧಕ. ಈ ಎರಡರಲ್ಲೂ ತೇರ್ಗಡೆಯಾದವನಿಗೆ ದೀಕ್ಷೆಯು ಕೊಡಲಾಗುತ್ತದೆ. ಆ ಅಂದಿನಿಂದ ಆತನು ದೀಕ್ಷಿತ ಎಂದು ಕರೆದು ಕೊಳ್ಳಲು ಅಧಿಕಾರ ಪಡೆಯುತ್ತಾನೆ. ಈ ದೀಕ್ಷಿತನು ವೇದ ಮತ್ತು ಶಾಸ್ತ್ರಗಳಲ್ಲಿ ಪಾಂಡಿತ್ಯ ಪಡೆದು ಆಚಾರ್ಯ ಎನ್ನಿಸಿಕೊಳ್ಳುತ್ತಾನೆ. ಆ ನಂತರ ಅವನು ಇತರರಿಗೆ ದೀಕ್ಷೆ ಕೊಡಲು ಅಧಿಕಾರ ಪಡೆಯುತ್ತಾನೆ.





ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುವೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

ಕಾಲ : ಬೆಳಗ್ಗೆ ೮ ರಿಂದ
ರಾತ್ರಿ ೮ ರ ವರೆಗೆ

ಟಿಕೆಟ್ ರೂ. ೧--೦೦ (ಹಿರಿಯರಿಗೆ)
" " ೦--೫೦ (ಕಿರಿಯರಿಗೆ)

# ಕನ್ನಡ ಮುಕುಂದಮಾಲಾಸ್ತೋತ್ರ

---.ಡಿ. ಕೆ. ಸುಬ್ರಹ್ಮಣ್ಯಂ,

ತಲೆಬಾಗಿ ವಂದಿಪೆನು ರಾಜಕುಲಶೇಖರಗೆ
ಆವನಾ ನಗರದಲಿ ರಂಗಯಾತ್ರೆಯ ಘೋಷ
ಅನುದಿನವೂ ಎಡಬಿಡದೆ ಅನುರಣಿಪುದೋ

* * * * * * * * * * * *

ಸಿರಿಗೊಡೆಯ ಕರುಣಾಳು ವರದ ದೇವರದೇವ
ಭಕುತರಾಣ್ಮನೆ ಭವವದಾಟಿಸುವನೇ
ಜಗದೊಡೆಯ ಎನ್ನೊಡೆಯ ನಾಗಶಾಯಿಯೆ ನಿನ್ನ
ನಾಮಜಪಿಸುವ ಭಾಗ್ಯ ಕರುಣಿಸಯ್ಯ

ಜಯ, ಜಯತು, ಜಯವೆಂಬೆ ದೇವಕೀನಂದನಗೆ
ಜಯ, ಜಯತು, ಜಯ ವೃಷ್ಣಿ ವಂಶ ಬೆಳಗುವಗೆ
ಜಯ, ಜಯತು, ಜಯ ಮೇಘಶ್ಯಾಮ ಕೋಮಲಗಾತ್ರ
ಜಯ, ಜಯತು ಜಯ ಪೃಥ್ವಿ ಭಾರಪರಿಹಾರಿ

ಹೇ ಮುಕುಂದನೆ ನಿನ್ನ ಪಾದಕಮಲಕೆ ಬಾಗಿ
ಅನುನಯದಿ ನಾ ಗೈವೆ ಬೇಡಿಕೆಯನು
ನಿನ್ನ ಪದಕಮಲಗಳ ಮರೆಯದಂದದಿ ಸದಾ
ಸ್ಮೃತಿ ಶಕುತಿ ನೀನೆನಗೆ ಕರುಣಿಸಯ್ಯ ೩

ಭವವ ದಾಟಲಿಕೆಂದು ನಿನಗೆ ವಂದಿಪುದಿಲ್ಲ
ಕುಂಭಿಪಾಕವ ದಾಟೆ ನಾ ಬೇಡೆನು
ಚೆನ್ನೆಯರ ತನುಲತೆಯ ಕಾಮಿಸುತ ನಾ ಬೇಡೆ
ಎನ್ನ ಹೃದಯದಿ ನೆಲಸು ಎಂದು ಮೊರೆ ಇಡುವೆನು ೪

ಧರ್ಮಾರ್ಥ ಕಾಮದಲಿ ನನಗಿಲ್ಲವೈ ಆಸೆ
ಸಂಚಿತದ ಕರ್ಮಗಳ ಅನುಭವಿಸುವೆನು
ಜನುಮ, ಜನುಮದಿ ನಿನ್ನ ಪಾದ ಪದುಮಗಳಲ್ಲಿ
ದೃಢ ಭಕುತಿ ಇರುವಂತೆ ಕರುಣೆ ದೋರೈ ೫

ನರಕ ವೈರಿಯೆ ನಾನು ಭೂ, ದ್ಯು ಲೋಕದಲಿರಲಿ
ಮನದುಂಬಿ ಹೇಳುವುದು ನಿನ್ನಲಿಷ್ಟೆ
ಶರದಭ್ರ ಕಾಂತಿಯಿಂ ರಾಜಿಸುವ ತಾವರೆಯ
ಧಿಕ್ಕರಿಪ ತವ ಚರಣ ಜಾನಿಸುವೆನು ೬

ಕೃಷ್ಣ ನಿನ್ನಯ ಚರಣ ಕಮಲದಲಿ ನೆಲಸಲೀ
ಎನ್ನ ಮಾನಸ ಹಂಸ ಈ ಕ್ಷಣದಲಿ
ಹರಣ ಹೋಗುವವೇಳೆ, ಕಫ, ವಾತ, ಪಿತ್ಥಗಳು
ಕೊರಳ ಕಟ್ಟಿರೆ ನಿನ್ನ ಸ್ಮರಣೆಯೆಲ್ಲಿ ೭

ಮಂದ ಹಸಿತದಿ ಮೆರೆವ ಹರಿಯ ವದನವ ನೆನೆವೆ
ನಾರದಾದಿಮುನಿಬೃಂದ ವಂದಿತನ ನೆನೆವೆ



ಪರಮ ಪುರುಷನ ನೆನೆವೆ ನಂದಗೋಪನ ನೆನೆವೆ
ಅನುಗಾಲ ನಾ ನೆನೆವೆ ಶ್ರೀಹರಿಯನು ೮

ತಿರೆಯ ಮರುಭುವಿಯಲ್ಲಿ ಬನ್ನ ಪಡುತಿಹ ನಾನು,
ಪದಕಮಲ, ಮೀನಾಕ್ಷಿ, ಭುಜ ವೀಚಿಯಿಂ
ಕಂಗೊಳಿಪ ಹರಿಸರದಿ ಮುಳುಗುತಲಿ ಛಳಲಿಕೆಯ,
ಕಳೆಯುವೆಂ ತೇಜ ಜಲ ಪಾನಗೈದು ೯

ಎಲೆ ಮನವೆ ಸ್ಮರಿಸು ನೀ ಅನುಗಾಲವೂ ಬಿಡದೆ
ಕಮಲ ನಯನನ, ಶಂಖ, ಚಕ್ರಧರನ,
ಮುರಹರನ ಸ್ಮರಣೆಗಿಂ ಮಿಗಿಲಾಧುದರಿಯೆನಾಂ
ಅಮೃತ ತುಲ್ಯವು ಅವನ ನಾಮ ಮಹಿಮೆ ೧೦

ಎಲೆ ಮೂಢಚಿತ್ತವೇ, ಯಮನ ಲೋಕದಿ ನೀನು
ಅನುಭವಿಪ ಯಾತನೆಯ ಚಿಂತಿಸದಿರು
ಆವ ಪಾಪದ ಬಾಧೆ ಸೋಂಕದೆಂದಿಗೂ ನಿನ್ನ
ಶ್ರೀಧರ ಸ್ವಾಮಿಯಂ ನೆನೆಯುವನ್ನೆಗಂ

ತಿರೆಯ ಮನುಜರ ದುಃಖ ನಾಶಗೈಯ್ಯುವ ದೇವ
ತನ್ನ ಭಕುತರ ದುಃಖ ಪರಿಹರಿಸನೇ ೧೧

ಭವ ಸಮುದ್ರದಿ ಮುಳುಗಿ, ಸುಖದುಃಖ ದ್ವಂದ್ವಗಳ
ಬಿರುಗಾಳಿಯಲಿ ಸಿಲುಕಿ ಸಲೆ ನೊಂದಿಹರ್
ಪತ್ನಿ, ಪುತ್ರ, ದುಹಿತೃ ರಕ್ಷಣೆಯ ಭಾರವಂ
ತಾಳಲಾರದೆ ಬಹಳ ಬನ್ನ ಪಟ್ಟಿಹರು
ವಿಷಮ, ವಿಷಯದ ವಿಷದಿ ಮುಳುಗುತಿರುವೀ ಜನರು
ನಾವೆ ದೊರೆಯದೆ ಬಹಳ ಕಷ್ಟ ಪಡುತಿರಲು
ಜಗವನಾವರಿಸಿರುವ 'ವಿಷ್ಣು'ವೆಂಬಾ ನಾವೆ
ಅವರನುದ್ಧರಿಸಲ್ಕೆ ಕಾದಿಹುದು ೧೨

ಆಸೆ ಎಂಬಾ ನೀರು ಕಾಮಜಂಝಾವಾತ, ಮೋಹದಲೆ,
ಸತಿ ಎಂಬ ಸುಳಿಗೆ ಸಿಲುಕಿ ಅಣ್ಣತಮ್ಮದಿರೆಂಬ ಮೊಸಳೆಗುಂಪಿರುವಂಥ,
ಸಂಸಾರ ಸಾಗರವ, ನಾನೀಸಲಾರೆ, ವರವ ಕೊಡುವಾದೇವ
ಮೂರು ಲೋಕಗಳೊಡೆಯ, ಭಕ್ತಿ ನಾವೆಯ ನಿತ್ತು ರಕ್ಷಿಸಯ್ಯ ೧೩

ಸಂಸಾರ ಸಾಗರವ ಹೇಗೆ ದಾಂಟಲಿ ಎಂದು
ಭಯ ಪಡುತ ಚಿಂತಿಸದಿರೆಲೆ ಚಿತ್ತವೆ
ನರಕ ವೈರಿ ಕಮಲನಯನನಲಿ, ನಿನ ಭಕ್ತಿ
ದೃಢದಿ ನೆಲಸಿರೆ, ಅವನು ದಾಂಟಿಸುವನು ೧೪

ನಾ ನೋಡಲಿಚ್ಛಿಸೆನು ತವಪಾದ ಪದ್ಮದಲಿ
ಭಕುತಿ ಇಲ್ಲದ ನರನ ಒಂದು ಚಣವೂ
ಕೇಳಲಿಂಪಾಗಿರುವ ನಿನ್ನ ಚರಿತೆಯ ವಿನಃ
ಮತ್ತಾವ ಕಥೆಯ ನಾಕೇಳಲೆಳಸೆ
ಸರ್ವ ಜಗದೊಡೆಯ ನೀನಿಲ್ಲವೆನ್ನುವನ
ಚಿತ್ತದಲಿ ನೆನೆಯಲ್ಕೆ ನಾಪೇಸುವೆಂ
ನಿನ್ನ ಬಿಟ್ಟೀಧರೆಯು ಚಲಿಸದೈ ತೃಣಮಾತ್ರ
ನಿನ್ನವಜ್ಞೆಯನಾನು ಎಂತು ಸಹಿಪೆಂ

ಕೀರ್ತಿಸಲೆ ನಾಲಗೆಯೆ ಕೇಶವನ ನಾಮವನು,
ಎಲೆ ಮನಸೆ ನೀ ಭಜಿಸು ಶ್ರೀಹರಿಯನು
ಕೈಗಳೆರಡೇ ನೀವು ಅರ್ಚಿಸಿರಿ ಅಚ್ಯುತನ
ಕಿವಿಗಳೆರಡೇ ಕೇಳಿ ಕೃಷ್ಣ ಕಥೆಯ
ಕಂಗಳೆರಡೇ ನೀವು ದರ್ಶಿಸಿರಿ ಶ್ರೀ ಚರಣ,
ಕಾಲ್ಗಳೆರಡೇ ಚಲಿಸಿ ಹರಿಯ ಗುಡಿಗೆ
ಎಲೆ ಶಿರವೆ, ನೀಬಾಗು ವಿಷ್ಣು ಪದತಲಕಿಂದು,
ಎಲೆ ಮೂಗೆ ಮೂಸು ನೀ ಪಾದತುಲಸಿ ೧೬

ಎಲೈ ಮರ್ತ್ಯರೇ, ಕೇಳಿ ಜನನ ಮರಣಗಳೆಂಬ
ವ್ಯಾಧಿಭೇಷಜವನ್ನು ನಾನೊರೆವೆನು
ಇದನೆ ಪೇಳ್ದರು ಹಿಂದೆ ಯಾಜ್ಞವಲ್ಕ್ಯಾದಿಗಳು
ಕೃಷ್ಣನಾಮಾಮೃತವೆ ಭಜಿಸಿರೆಂದು
ಪರಮ ದಿವ್ಯೌಷಧಿಯ ಕುಡಿವೆಲ್ಲ ಜನರಿಂಗೆ
ಶಾಶ್ವತದ ಸುಖವದುವೆ ದೊರೆವುದೆಂದು ೧೭

ಹೇ ಮರ್ತ್ಯರೇ ಕೇಳಿ ಸಂಸಾರ ಜಲಧಿಯಲಿ
ಪಿರಿದಪಾಯದ ವೀಚಿ ಮಾಲೆ ತುಂಬಿಹುದು
ಮಗ್ನರಾಗಿಹ ನಿಮಗೆ ಒರೆವೆ ಪರಹಿತ ಒಂದ
ಎಡಬಿಡದೆ ನೀವದನು ಚಿತ್ತೈಸಿರಿ
ನಾರಾಯಣಗೆ ನಮಿಸಿ ಎಂಬ ಈ ಮಂತ್ರಮಂ
ಬಾರಿಬಾರಿಗೆ ಚಿತ್ತದಲ್ಲಿ ಸ್ಮರಿಸಿ
ದಾಂಟಿ ಭವಸಾಗರವ ಶಾಶ್ವತದ ಮುಕುತಿಯನು
ಪಡೆಯುವಿರಿ ಇದಕೆ ಸಂಶಯವಿಲ್ಲವು ೧೮

ಚಿದ್ವಿಭೂತಿಯೆ ನಿನ್ನ ಮಹಿಮೆಯಿಂದೀ ಜಗವು
ಅಣುಮಾತ್ರವಾಗಿ ತಾ ತೋರುತಿಹುದು
ಉದಧಿ ಜಲವೆಲ್ಲವುಂ ನೀರಪನಿಯಂತಾಗೆ,
ತೇಜಸ್ಫುಲಿಂಗದಾಕಾರ ತಳೆದಿಹುದು
ವಾಯು ಮೆಲ್ಲುಸಿರಾಗಿ, ಆಗಸವದೆಲ್ಲವುಂ
ಸೂಕ್ಷ್ಮರಂಧ್ರದ ತೆರದಿ ಕಾಣುತಿಹುದು
ಹಿರಿಹರ ಬ್ರಹ್ಮಾದಿ ದೇವ ವೃಂದವರೆಲ್ಲ
ಕ್ಷುದ್ರ ಜೀವಿಗಳಂತೆ ಕಾಣುತಿಹರು ೧೯

ಹೇ ಕಮಲನ ಮಿತ್ರನೇ, ಆವಗಂ ನಾನಿನ್ನ
ಜಾನಿಸುತ ಪದಕಮಲದಮೃತ ಸವಿವೆಂ
ಆವಗಂ ನಿಜಕರವ ಜೋಡಿಸುವೆ, ಈಶಿರವ
ಬಾಗಿಸುತ ಪುಲಕದಿಂ ಮೈ ಮರೆಯುವೆಂ
ಎನ್ನ ಕಂಠಸ್ವರದಿ ಗದ್ಗದವು ತುಂಬಿರಲು
ನೇತ್ರದಿಂ ಆನಂದ ಬಾಷ್ಪ ಸುರಿಪೆಂ ೨೦

ಗೋವ ರಕ್ಷಿಸುವವನೆ, ಹೇ ದಯಾಸಾಗರನೆ, ಮುನ್ನೀರಮಗಳಪತಿ
ಕಂಸರಿಪುವೆ, ಕೃಪೆದೋರಿ ಗಜರಾಜನುದ್ಧರಿಸಿದಾ ದೇವಮಾಧವನೆ,
ಬಲರಾಮನನುಜ ಹರಿಯೆ, ಮೂರುಲೋಕಗಳೊಡೆಯ,
ಗೋಪಿಕಾ ವಲ್ಲಭನೆ, ಕಮಲ ನೇತ್ರನೆ, ಎನ್ನ ರಕ್ಷಿಸಯ್ಯ ೨೧

ಭಕ್ತರನು ಮುತ್ತುತಿಹಪಾಯ ಸರ್ಪಂಗಳಿಗೆ
ವೈನತೇಯನತೆರದಿ ನೀನಿರುವೆಯ್ಯೆ
ಮೂರು ಲೋಕವ ಕಾವ ರಕ್ಷಮಣಿ ನೀನಾಗಿ,
ಗೋಪಿಯರ ನೇತ್ರ ಚಾತಕ ಮೇಘ ವಾದೆ
ಮೂಜಗದ ಸೌಂದರ್ಯದಾತಾರೆರುಕುಮಿಣಿ ದೇವಿ,
ಘನ ಕುಚದಿ ಚಂದದಿಂ ರಾಜಿಸುತಿಹೆ
ಎಲ್ಲ ನಿರ್ಜರರೊಡೆಯ, ಗೋಪಾಲಬಾಲನೆ,
ಸರ್ವ ಶ್ರೇಯವನೆಮಗೆ ಕರುಣಿಸಯ್ಯ ೨೨

ಮುತ್ತಿರುವ ಶತ್ರುಗಳ ಜಯಿಸುವಂತಹ ಮಂತ್ರ
ಸರ್ವೋಪನಿಷದುಕ್ತ ದಿವ್ಯಮಂತ್ರ
ಭವಸಾಗರೋತ್ತರಣ, ದಟ್ಟೈಸಿದಜ್ಞಾನ,
ನಿರ್ಮೂಲಗೈವಂಥ ಸಿದ್ಧ ಮಂತ್ರ
ಸರ್ವ ಸಂಪದ ಕೊಡುತ, ವ್ಯಸನಾಹಿದಷ್ಟರನು
ರಕ್ಷಣೆಯ ಗೈವಂಥ ಭಿಷಜ ಮಂತ್ರ
ಜನ್ಮಸಾರ್ಥಕ ಗೈದು ಸಫಲತೆಯ ಕೊಡುವಂಥ
ಶ್ರೀ ಕೃಷ್ಣ ಮಂತ್ರಮಂ ಜಪಿಸು ಜಪಿಸು ೨೩

ಕವಿದಿರುವ ಅಜ್ಞಾನ ತಿಮಿರನಾಶಕ ಭಿಷಜ
ಮುನಿಮನೋವೃತ್ತಿ ನಿಯಂತ್ರ ಭಿಷಜ
ದೈತ್ಯ ತತಿಗಾಪತ್ತ ತಂದೊಡ್ಡುವಾ ಭಿಷಜ
ಮೂರುಲೋಕದ ಕಾವಸಿದ್ಧ ಭಿಷಜ
ಅಪವರ್ಗ ಸಿರಿಯಿತ್ತು, ರಕ್ಷಣೆಯ ಗೈಯ್ವಂಥ,
ಶ್ರೀಕೃಷ್ಣ ಮಂತ್ರವೀ ದಿವ್ಯ ಭಿಷಜ ೨೪

ಶ್ರೀಕೃಷ್ಣ ಪದಕಮಲ ಸ್ಮರಣೆ ಗೈಯ್ಯದೆ ಇರಲು
ಶ್ರುತಿಪಾಠಮೆಲ್ಲ ಮರಣ್ಯ ರೋದನವು
ಅನುದಿನದಿ ಆಚರಿಪ ದೇವ ವ್ರತಗಳುಮೆಲ್ಲ
ದೇಹಶ್ರಮ ಮಾತ್ರ ಫಲವೀವವು
ಆಚರಿತ ಸುಕೃತಗಳು ಭಸ್ಮಹೋಮದತೆರದಿ
ಫಲರಹಿತಮಾಗಿ ತಾ ಪರಿಣಮಿಪವು
ತೀರ್ಥ ಕ್ಷೇತ್ರದ ಸ್ನಾನ ಗಜಸ್ನಾನವಂದದಲಿ
ನಿಷ್ಪ್ರಯೋಜಕಮಾಗಿ ಪರಿಣಮಿಪುದು ೨೫

'ನಾರಾಯಣ'ನ ನಾಮ ಜಪಿಸಿದಂತಹ ಪಾಪಿ
ವಾಂಛಿತಾರ್ಥವ ಪಡೆಯದಿರುವನೇನು
ಪೂರ್ವಕರ್ಮದ ಫಲದ ಪರಿಣಾಮದಿಂದಾನು
ಶ್ರೀಕೃಷ್ಣನಾಮಮಂ ಜಪಿಸಲಿಲ್ಲ
ಅದರಿಂದ ಸಮನಿಸಿದೆ ಗರ್ಭವಾಸದ ದುಃಖ
ಎಲೆ ಜಿಹ್ವೆ ನೀ ಜಪಿಸು ಕೃಷ್ಣನಾಮ ೨೬

ಮಧುಕೈಟಭಾರಿಯೇ, ಒಡಲತಳೆದುದಕೆಂದು
ನಿನ್ನ ನಾ ಬೇಡುವುದು ಇಷ್ಟು ಮಾತ್ರ
ನಿನ್ನ ದಾಸನ, ದಾಸನವನ ಪರಿಚಾರಕನ
ದಾಸನಾ ದಾಸನೆಂದೆನ್ನ ಸ್ಮರಿಸೈ ೨೭

ಮೂರು ಲೋಕಗಳೊಡೆಯ ಪುರುಷೋತ್ತಮಾದೇವ
ಮನತುಂಬ ಪ್ರಾರ್ಥಿಸಲು ಅರ್ಹನಲ್ತೆ
ಸೇವ್ಯಪದವಿಯನಿತ್ತು ಆವಗಂ ಸಲಹುವನು
ನಮ್ಮೊಡೆಯನಲ್ಲವೇ ನಾರಾಯಣ
ದೊರೆಯೆಂಥ ಸ್ವಾಮಿಯನು ಮೂಢಮತಿಗಳು
ನಾವು ಸೇವೆ ಗೈದೆವು ನರನ ಬಹುನೀಚನ
ಕತಿಪಯಗ್ರಾಮೇಶನಲ್ಪಾರ್ಥದಾಯಕನ,
ದುರಿತಾಹಿ ದಷ್ಟನಾಹೀನ ನರನ ೨೮
ಶ್ರೀಧರನ ಪದಕಮಲಕಾವಾಸ ಎನ್ನ ಮನ
ತೊರೆಯದನು ಕಂದರ್ಪ ಬಹುಬೇಗನೆ
ಹರನ ನೇತ್ರಾಗ್ನಿಯಿಂದನಂಗನಾಗಿಹ ನೀನು
ಅರಿಯೆಯಾ ಮುರವೈರಿ ಚಕ್ರಮಹಿಮೆ ೨೯

ಎಲೆ ನಾಲಗೆ ಕರ ಜೋಡಿಪೆ ನಿನಗೆ
ಭಜಿಸು ಪರಾತ್ಪರ ದೇವನನು
ಸಜ್ಜನ ನಿಕರಕೆ ಸಿಹಿದ್ರಾಕ್ಷಿಯೊಲು
ಇಹ ಹರಿನಾಮವ ಜಪಿಸುತಿರು ೩೦

ಒಡಲಿದುವೆ ದುರ್ಬಲವು ಪರಿಣಾಮ ಪೇಶಲವು
ಪತನ ಸುಲಭವು ಜೀರ್ಣ ಜರೆಯಿಂದಲಿ

ಇದನರಿತು ಎಲೆ ಮೂಢ ಬಿಡು ಭಿಷಜ ಸೇವಿಪುದ
ಸೇವಿಸೈ ಶ್ರೀಕೃಷ್ಣ ಮಧುರಸಾಯನವ ೩೧

ನಿನ್ನ ಮಗಳಾದರೋ ಉದಧಿರಾಜನ ಕನ್ಯೆ
ಮಗನು ಕಮಲಾಸನ, ಸ್ತೋತ್ರ, ವೇದವಲ್ಲಿ,
ದಾಸಗಣ ನಿರ್ಝರರು ನಿನ್ನನುಗ್ರಹ ಭಕ್ತಿ
ನಿನ್ನ ಧಾಮವು ತಾನೆ ಈ ವಸುಧೆಯು
ನಿನ್ನಮ್ಮ ದೇವಕಿಯು, ಸಖನಿಂದ್ರಸುತಪಾರ್ಥ,
ತಿಳಿಮುದಿಪ್ಪೆನಗೆ ದೇರೇನನರಿಯೆ ೩೨

ಮೂರು ಲೋಕಗಳೊಡೆಯ ಕೃಷ್ಣ ರಕ್ಷಿಸಲೆಮ್ಮ
ಕೃಷ್ಣ ಪದಕಮಲಕ್ಕೆ ನಾನೆರಗುವೆಂ
ಕೃಷ್ಣನಿಂ ಪುಟ್ಟಿತೀ ಅಖಿಲ ಬ್ರಹ್ಮಾಂಡವಿದು,
ಕೃಷ್ಣಂಗೆ ಶರಣಾದೆ ದಾಸನಾನು
ಕೃಷ್ಣನಲಿ ಅಡಗಿಹುದು ಸಕಲ ವಿಶ್ವವಿದೆಲ್ಲ
ಹೇ ಕೃಷ್ಣ ರಕ್ಷಿಸೈ ಎನ್ನ ಬಿಡದೆ ೩೩

ಕರುಣಿಸೆನ್ನಲಿ ದೇವ ಬೇಡುವೆ ನನುಗ್ರಹವ
ಹೇಕೃಷ್ಣ ಕೃಪೆದೋರು ನನ್ನ ಮೇಲೆ
ಪರಮದಯಶಾಲಿ ನೀ ಸಂಸಾರಸಾಗರದಿ
ಮಜ್ಜಿತನ ದೇವನನಂತ ಉದ್ಧರಿಸು ೩೪

ನಮಿಸುವೆನು ಚರಣಕಮಲಕ್ಕೆ ನಾರಾಯಣನ
ಪೂಜಿಪೆನು ನಾರಾಯಣನ ಆವಗಂ ಬಿಡದೆ
ನುಡಿವೆ ನಾರಾಯಣನ ದಿವ್ಯ ನಿರ್ಮಲ ನಾಮ
ಸ್ಮರಿಪೆ ನಾರಾಯಣನ ಪರತತ್ವವ ೩೫

ಶ್ರೀನಾಥ ನಾರಾಯಣ ವಾಸುದೇವ
ಶ್ರೀಕೃಷ್ಣ ಭಕ್ತಪ್ರಿಯ ಚಕ್ರಪಾಣೇ
ಶ್ರೀ ಪದ್ಮನಾಭಾಚ್ಯುತ ಕೈಟಭಾರೇ
ಶ್ರೀ ರಾಮ ಪದ್ಮಾಕ್ಷ ಹರೇ ಮುರಾರೇ ೩೬

ಅನಂತ, ವೈಕುಂಠ, ಮುಕುನ್ದ, ಕೃಷ್ಣ
ಗೋವಿಂದ ದಾಮೋದರ ಮಾಧವನೆಂದು
ನುಡಿ ಪಲುಕೆ ಆವಗಂ ಸಮರ್ಥರಾಗಿಹ ಜನರು
ಓರ್ವರುಂ ನುಡಿಯದೆಲೆ ವ್ಯಸ್ತರಾಗಿಹರಹಾ !! ೩೭

ಸಿರಿಗೊಡೆಯ, ನರಹೃದಯ ವಾಸಿಯೇ ಜಗದೊಡೆಯ
ಕೃಷ್ಣ ದೇಹಿಯೆ, ಭಕುತರಾಣ್ಮ ಚಕ್ರಧರ
ನಾಭಿಕಮಲದಿ ಪದ್ಮ ಧರಿಸಿರ್ಪ ಶಾಶ್ವತನೆ
ಕೈಟಭಾರಿಯೆ, ರಾಮ ಪದ್ಮಾಕ್ಷನೇ
ಮುರನ ಸಂಹರಿಸಿದನೆ, ಜಗವಕಾಯುವದೇವ
ಆವಗಂ ಬಿಡದೆಮ್ಮ ಕಾಯೋ ಹರಿಯೆ ೩೮

ಆವಗಂ ವಿಷ್ಣುವನನಂತ ನವ್ಯಯನನ್ನು
ಹೃತ್ಸರೋಜದಿ ಸದಾ ನೆಲಸಿರ್ಪನನ್ನು
ಶರಣಾಗತತ್ರಾಣ ಭಕ್ತರಾಧೀನನನು
ಭಜಿಸಿದರೆ ದೊರೆವುದೈ ವಿಷ್ಣುಪದವಿ ೩೯

ಪಾಲ್ಗಡಲ ವೀಚಿಯಿಂ ಸಿಡಿದ ಶೀಕರ ನಿಕರ
ನಕ್ಷತ್ರದೊಲು, ಆರ ದೇಹ ರಂಜಿಪುದೋ,
ಸರ್ಪ ಪರ್ಯಂಕದಲಿ ಪವಡಿಸಿಹ ಮಾಧವನ
ಮಧುವೈರಿಗಾವಗಂ ವಂದಿಸುವೆನು ೪೦

---

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

*ಶ್ರೀ ಗೋವಿಂದರಾಜಸ್ವಾಮಿ ದೇವಾಲಯ*
*ಶ್ರೀ ಕೋದಂಡರಾಮಸ್ವಾಮಿ ದೇವಾಲಯ*
*ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು*
*ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ*
*ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ*

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

# ಹಿಂದೂಗಳ ದೇವತೆ ಗೋಮಾತೆ

---ಎಸ್. ರೋಹಿಣೀಶರ್ಮ.

"ಮಾತರಃ ಸರ್ವಭೂತಾನಂ
ಗಾವಃ ಸರ್ವಸುಖಪ್ರದಾಃ
ವೃದ್ಧಿ ಮಾಕಾಂಕ್ಷತಾ ನಿತ್ಯಂ
ಗಾವಃ ಕಾರ್ಯಾಃ ಪ್ರದಕ್ಷಿಣಾಃ"

ಹಾಲನ್ನು ಕೊಟ್ಟು ನಮ್ಮ ಆರೋಗ್ಯ -- ಭಾಗ್ಯಗಳನ್ನು ದಿನೇ ದಿನೇ ಉಚ್ಛ್ರಾಯ ಸ್ಥಿತಿಗೆ ಕೊಂಡೊಯ್ಯುವ ಗೋಮಾತೆ ಸಕಲ ಜೀವಾತ್ಮಗಳಿಗೂ ತಾಯಿಯಂತೆ ಬೇಡಿದವರಿಗೆ ಇಷ್ಟಾರ್ಥವನ್ನೀಯುವವಳು. ಸುಖ--ಶಾಂತಿಯನ್ನು ನೀಡುವವಳಾದ ಈ ಗೋಮಾತೆಯನ್ನು ಸ್ತುತಿ, ಪ್ರದಕ್ಷಿಣೆ, ನಮಸ್ಕಾರ ಹಾಗೂ ಆಹಾರ ಧಾನ್ಯಗಳಿಂದ ಪೂಜಿಸಿದರೆ ಬಯಸಿದ ಫಲವನ್ನು ಕೊಡುವ ಕಾಮಧೇನುವೂ ಹೌದು.

ಹಿಂದೂ ಸಂಸ್ಕೃತಿಯಲ್ಲಿ ಜಾತಿ, ಮತ, ಪಂಥ, ಪ್ರಾಂತ, ಭಾಷೆ ಮುಂತಾದ ಯಾವೊಂದು ತೊಡಕಿನಲ್ಲಿಯೂ ಸಿಕ್ಕಿಕೊಳ್ಳದೆ ಸಕಲ ಹಿಂದುಗಳಿಗೂ ಸಮಾನವಾಗಿರುವ ಈ ಮಾತೆ ಹಿಂದುಗಳ ಶ್ರದ್ಧಾ ಕೇಂದ್ರ ಬಿಂದುವೂ ಆಗಿದ್ದಾಳೆ. ಗೋಮಾತೆಯನ್ನು ಆಧ್ಯಾತ್ಮಿಕ, ಧಾರ್ಮಿಕ ಹಾಗೂ ಲೌಕಿಕ ಮಹತ್ತಿನಿಂದಲೂ ಗಣನೆಗೆ ತೆಗೆದುಕೊಂಡರೆ ಅವರ ಮಹತ್ವವೂ ಅಪಾರವಾದುದು.

ವೇದ ಪುರಾಣದಿಂದ ಹಿಡಿದು ಇಂದಿನ ಆಧುನಿಕ ಯುಗದಲ್ಲಿಯೂ ಕೂಡ "ಸಕಲ ದೇವತಾಮಯಿ" ಎಂದೇ ಪೂಜ್ಯನೀಯಳಾದ ಈಕೆಯನ್ನು ಎಷ್ಟು ಹೊಗಳಿದರೂ -- ಹಾಡಿದರೂ -- ಪೂಜಿಸಿದರೂ ಅಂತ್ಯವೇ ಆಗಲಾರದು.

"ನಮೋ ಗೋಭ್ಯಃ ಶ್ರೀಮತೀಭ್ಯಃ
ಸೌರಭೇಯಿಾಭ್ಯಃ ಏವ ಚ
ನಮೋ ಬ್ರಹ್ಮಸುತಾಭ್ಯಶ್ಚ
ಪವಿತ್ರಾಭ್ಯೋ ನಮೋನಮಃ"

ಸಮುದ್ರ ಮಥನ ಕಾಲದಲ್ಲಿ ಉದ್ಭವಿಸಿದ ಕಾಮದೇನುವು ಕಶ್ಯಪಬ್ರಹ್ಮ ಮತ್ತು ಸುರಭೀದೇವಿಯರ ಸಂತಾನವಾಗಿದ್ದು ಶಾಂತಿ, ಪುಷ್ಟಿ ಮುಂತಾದ ವಿವಿಧ ಸಂಪತ್ತಿನಿಂದ ಬೆಳಗುವವಳು. ಯಾವಾಗಲೂ ಪವಿತ್ರಳಾದ ನಿನಗೆ ಮತ್ತೆ ಮತ್ತೆ ನಮಸ್ಕಾರಗಳು ಎಂದು ಸ್ಮೃತಿಯಲ್ಲಿ ಗೋಮಾತೆಯನ್ನು ಕುರಿತು ಹೊಗಳಲಾಗಿದೆ.

ಒಮ್ಮೆ ಚ್ಯವನ ಮಹರ್ಷಿ ಗಂಗೆಯಲ್ಲಿ ಮುಳುಗಿ ಬಹಳದಿನಗಳು ಸಮಾಧಿ ಸ್ಥಿತಿಯಲ್ಲಿದ್ದಾಗ ಮೀನಿಗಾಗಿ ಬಲೆಬೀಸಿದ ಬೆಸ್ತರ ಬಲೆಗೆ ಸಿಕ್ಕಿಕೊಂಡರು. ಮೀನಿನೊಡನೆ ಮಹರ್ಷಿಯನ್ನೂ ದಡಕ್ಕೆ ತಂದು ಹಾಕಿದ ಬೆಸ್ತರಿಗೆ ದಿಕ್ಕು ತೋಚದಾಯಿತು. ಕೂಡಲೇ ಬೆಸ್ತರು ಓಡಿಹೋಗಿ ರಾಜ ನಹುಷನಲ್ಲಿ ಬಿನ್ನೈಸಿಕೊಂಡಾಗ ಸ್ವತಃ ನಹುಷನೇ ಮಹರ್ಷಿಯೆಡೆಗೆ ಬಂದು ನಮಸ್ಕರಿಸಿ "ಏನಾಗದೇಕೆಂದು ಬೇಡಿದನು". "ರಾಜನೆ, ಮೊದಲು ಈ ಮೀನುಗಳಿಗೆ ನೆಲೆ ಕಾಣಿಸು. ಇವುಗಳು ಉಳಿದರೆ ಮಾತ್ರ ನಾನು ಉಳಿಯುವೆನು" ಎಂದಾಗ ಬೆಸ್ತರಿಗೆ ರಾಜ ಮೀನಿನ ಬೆಲೆಕೊಟ್ಟು ಎಲ್ಲವನ್ನೂ ನೀರಿಗೆ ಹಾಕಿಸಿ ಮಹರ್ಷಿಯನ್ನು ತನ್ನ ಅರಮನೆಗೆ ಆಹ್ವಾನಿಸುತ್ತಾನೆ. "ರಾಜ! ನಾನು ಬೆಸ್ತರಿಗೆ ಸೇರಿದ ವಸ್ತು. ನನ್ನ ಬೆಲೆಯನ್ನು ಇವರಿಗೆ ಕೊಟ್ಟು ನನ್ನನ್ನು ಬಿಡುಗಡೆ ಮಾಡಿಕೋ" ಎಂದಾಗ ರಾಜನು ಒಂದು ಸಾವಿರದಿಂದ............ ಲಕ್ಷ........... ಕೋಟಿ............ ಹೀಗೆ ಎಷ್ಟು ನಾಣ್ಯಗಳನ್ನು ಕೊಡಲು ತಯಾರಾದರೂ ಚ್ಯವನ ಮಾತ್ರ ತನ್ನ ಬೆಲೆ ಇಷ್ಟಲ್ಲವೆಂದು ನಿರಾಕರಿಸುತ್ತಾನೆ. ಕೊನೆಗೆ ಸೋಲನ್ನು ಒಪ್ಪಿಕೊಂಡ ರಾಜನಿಗೆ ವಾನಪ್ರಸ್ಥನೆಂಬ ಜ್ಞಾನಿಯು "ರಾಜಾ! ಒಂದು ಒಳ್ಳೆಯ ಹಸುವನ್ನು ದಾನವಾಗಿ ಕೊಡು. ಇದೇ ಈ ಮಹರ್ಷಿಯ ನಿಜವಾದ ಬೆಲೆ" ಎಂದಾಗ ಮಹರ್ಷಿಗೂ ಸಂತಸವಾಯಿತು; ರಾಜನಿಗೂ ಸಂತೃಪ್ತಿಯಾಯಿತು. ಅಂತೆಯೇ ಮಹಾಕವಿ ಕಾಳಿದಾಸನು ತನ್ನ ಮಹಾಕಾವ್ಯ ರಘುವಂಶದಲ್ಲಿ ದಿಲೀಪ ಚಕ್ರವರ್ತಿಯ ವ್ಯಕ್ತಿತ್ವವನ್ನು ವರ್ಣಿಸುವಾಗ ಗೋವಿನ ಮಹಿಮೆಯನ್ನು ಬಣ್ಣಿಸಿದ್ದಾನೆ. ಸಂತಾನಾಪೇಕ್ಷಿಯಾದ ದಿಲೀಪನು ಹೋಮಧೇನುವಾದ ನಂದಿನಿಯನ್ನು



ಸೇವೆ ಮಾಡುವ ವ್ರತ ಕೈಗೊಂಡು ಎಡಬಿಡದೆ ಸೇವೆ ಸಲ್ಲಿಸುತ್ತಿರುವಾಗ ಆ ನಂದಿನಿಯೇ ಪರೀಕ್ಷಿಸಲು ಸಿಂಹದ ಇನ್ನೊಂದು ರೂಪತಾಳಿ ಎದುರು ಬಿದ್ದಾಗ ದಿಲೀಪನು ತನ್ನ ದೇಹವನ್ನೇ ಅರ್ಪಿಸಿಕೊಳ್ಳಲು ಮುಂದಾಗುತ್ತಾನೆ. ಆಗ ನಂದಿನಿ ಪ್ರತ್ಯಕ್ಷಳಾಗಿ--

"ಭಕ್ತ್ಯಾ ಗುರೌ ಮಯ್ಯನುಕಂಪಯ್ಯಾ
ಚ ಪ್ರೀತಾಸ್ಮಿತೇಪುತ್ರವರಂ ವೃಣೀಷ್ವ
ನ ಕೇವಲಾನಾಂ ಪಯಸಾಂ ಪ್ರಸೂತಿಂ,
ಅವೇಹಿಮಾಂ ಕಾಮದುಘಾಂ ಪ್ರಸನ್ನಾಂ"

ನಾನು ಬರಿಯ ಹಾಲನ್ನು ಕರೆಯುವ ಒಂದು ಪ್ರಾಣಿಯಲ್ಲ, ದೇಕಾದ್ದನ್ನು ಕೊಡುವ ಕಾಮಧೇನು. ನಿನಗೆ ಬೇಕಾದ ವರ ಬೇಡಿಕೋ ಎಂದಾಗ ದಿಲೀಪನ ಇಚ್ಛೆಯಂತೆ ಪುತ್ರಪ್ರಾಪ್ತಿ ಅನುಗ್ರಹಿಸುತ್ತದೆ. ಈ ರೀತಿ ಗೋವನ್ನು ಭಕ್ತಿಯಿಂದ ಪೂಜಿಸಿ ಅದರ ಸೇವೆಯನ್ನೇ ಧ್ಯೇಯವಾಗಿಟ್ಟುಕೊಂಡು ಇಷ್ಟಾರ್ಥಸಿದ್ಧಿ ಪಡೆದ ಅನೇಕ ಪುಣ್ಯ ಪುರುಷರ ಅನೇಕ ದೃಷ್ಟಾಂತಗಳು ವೇದ--ಪುರಾಣ--ಸ್ಮೃತಿಗಳಿಂದ ಲಭ್ಯವಾಗುತ್ತದೆ. ಹಾಗೇ ಜನಪದದಲ್ಲಿ ಬರುವ ಪುಣ್ಯಕೋಟಿಯ ಸತ್ಯಸಂಧತೆಯ ಕಥೆಯು ಎಂಥವರಿಗೂ ಕಣ್ಣೀರು ತರಿಸಿ ಕಣ್ಣು ತೆರೆಸುತ್ತದೆ.

ಒಮ್ಮೆ ಪರಶುರಾಮರಿಂದ ವಿದ್ಯಾಭ್ಯಾಸ ಮಾಡಿದ ದಾನಿ ಕರ್ಣ ದಟ್ಟಡವಿಯಲ್ಲಿ ಬರುತ್ತಿದ್ದಾನೆ. ಅಹಂಕಾರ--ಅಶ್ರದ್ಧೆಯ ಫಲವಾಗಿ ಅವನು ಕತ್ತಿಯ ಒರೆಯನ್ನು ಜೋರಾಗಿ ಬೀಸುತ್ತಾ ಬರುತ್ತಿದ್ದಾಗ ಅವನ ಕತ್ತಿಯ ಬರೆ ನೆಲದಮೇಲೆ ಮಲಗಿದ್ದ ಬ್ರಾಹ್ಮಣನೋರ್ವನ ಹಸುವಿಗೆ ತಾಗಿ ವಿಲವಿಲನೆ ಒದ್ದಾಡುತ್ತಾ ಅದು ಸತ್ತುಹೋಗುತ್ತದೆ. ವಿಷಯ ತಿಳಿದ ಬ್ರಾಹ್ಮಣನು ತುಂಬ ನೊಂದುಕೊಂಡು ಗೋಳಾಡಿ ಅಂತ್ಯದಲ್ಲಿ "ನನ್ನ ಹಸು ನೆಲಕ್ಕೆ ತಾಗಿ ಬಿದ್ದಂತೆ ಮಹಾಭಾರತ ಯುದ್ಧಕಾಲದಲ್ಲಿ ನಿನ್ನ ರಥದ ಚಕ್ರಗಳೂ ನೆಲದಲ್ಲಿ ಹೂತುಹೋಗಲಿ" ಎಂದು ಶಪಿಸುತ್ತಾನೆ. ಬ್ರಾಹ್ಮಣ ಋಷಿಯಶಾಪ, -- ಹಸುವಿನ ಶಾಪ ಹುಸಿಯಾಗಲುಂಟೆ? ಇದರ ಫಲವಾಗಿಯೇ ಮುಂದಿನ ಮಹಾಭಾರತ ಯುದ್ಧದಲ್ಲಿ ಕರ್ಣನ ರಥ ಬಲವಾಗಿ ನೆಲಕ್ಕಚ್ಚಿ ಹೋಗುತ್ತದೆ. ಕರ್ಣನಿಗೆ ಬ್ರಾಹ್ಮಣನಿಂದ ಬಂದ ಗೋಹತ್ಯಾ ಪಾಪದ ಶಾಪದ ಫಲ ಎಂಥ ಪರಿಣಾಮ ಬೀರಿತಲ್ಲವೆ? ವೈದಿಕ ಹಾಗೂ ಪೌರಾಣಿಕ ಗ್ರಂಥಗಳಲ್ಲಿ ನಾವು ಗೋಮಾತೆಯ ವಿಶ್ವರೂಪದ ವಿಸ್ತೃತ ವರ್ಣನೆಯನ್ನು ಕಾಣಬಹುದು. ಗೋಮಾತೆಯ ಪ್ರತಿಯೊಂದು ಅಂಗವೂ ಸರ್ವದೇವತೆಗಳ ಆವಾಸಸ್ಥಾನ. ಆದ್ದರಿಂದ ಎಲ್ಲ ಪೂಜೆಗಿಂತಲೂ ಗೋಪೂಜೆಯೊಂದರಿಂದಲೇ ಸರ್ವದೇವತೆಗಳನ್ನು ಸಂತೃಪ್ತಿ ಪಡಿಸಬಹುದು. ಕೋಡಿನ ತುದಿಯಿಂದ ಹಿಡಿದು ಕಾಲಿನ ಗೊರಸಿನವರೆಗೂ ದೇವತೆಗಳ ಸಂಗಮವೇ ಅಡಗಿದೆ.

"ಗೋವಿಗೆ ಸಮಾನವಾದ ಸಂಪತ್ತು ಬೇರೆ ಇಲ್ಲ. ಗೋವೇ ಸ್ವರ್ಗಕ್ಕೆ ಸೋಪಾನ. ಸ್ವರ್ಗದಲ್ಲೂ ಗೋವು ಪೂಜ್ಯನೀಯವಸ್ತು. ಗೋವುಗಳು ಕಾಮಧೇನುಗಳೆಂದು ಮಹಾಭಾರತದ ಅನುಶಾಸನ ಪರ್ವ ಐವತ್ತೊಂದನೇ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿವೆ. ಗೋವುಗಳನ್ನು ಪೂಜಿಸುವುದು, ನೋಡುವುದು, ಹೊಗಳುವುದು, ಹಾಗೂ ಗೋದಾನ ಇವುಗಳು ಎಲ್ಲಾ ಪಾಪಕೃತ್ಯಗಳನ್ನು ಹೋಗಲಾಡಿಸುತ್ತದೆ.

## ಗೋದಾನ ಅತಿ ಶ್ರೇಷ್ಠದಾನ :

ಯಜ್ಞದ ಮುಖ್ಯ ಸಾಧನಗಳಾದ ವೇದಮಂತ್ರಗಳು ಗೋವಿನಲ್ಲಿಯೇ ಅಡಗಿರುವುದರಿಂದ ಯಜ್ಞದಲ್ಲಿ ಗೋವಿಗೆ ಪ್ರಾಧಾನ್ಯತೆ. ಅನ್ನದಾನ, ಕನ್ಯಾದಾನ, ಗೋದಾನಗಳು ದಾನಗಳಲ್ಲೇ ಅತಿ ಶ್ರೇಷ್ಠವಾದ್ದರಿಂದ ಗೋದಾನದಿಂದ ಸಕಲ ಇಷ್ಟಾರ್ಥಗಳೂ ಈಡೇರುತ್ತವೆ. ಕೆಲವು ಸಂಪ್ರದಾಯಗಳಲ್ಲಿ "ಸುವರ್ಣಗೋದಾನ" ವೂ ಮುಖ್ಯವಿಧಿಗಳಲ್ಲಿ ಒಂದಾಗಿದೆ.

ಕಠೋಪನಿಷತ್ತಿನಲ್ಲಿ ಬರುವ ನಚಿಕೇತನ ಕಥೆ ಗೋದಾನದ ಮಹತ್ವಕ್ಕೊಂದು ಉತ್ತಮ ಉದಾಹರಣೆ. ನಚಿಕೇತನ ತಂದೆ ಅಯೋಗ್ಯ ಪಸುಗಳನ್ನೇ

ದಾನಮಾಡುವುದನ್ನು ನೋಡಿ -- ನೋಡಿ ಕುಪಿತನಾದ ಮಗ ನನ್ನನ್ನು ಯಾರಿಗೆ ದಾನವಾಗಿ ಕೊಡುತ್ತೀಯೆ ಎಂದಾಗ ಸಿಟ್ಟಿನಿಂದ ಯಮನಿಗೆ ಎನ್ನುತ್ತಾನೆ. ನಚಿಕೇತ ಇದನ್ನೇ ಗಟ್ಟಿಯಾಗಿಟ್ಟುಕೊಂಡು ಯಮಧರ್ಮನಲ್ಲಿ ಹೋಗಿ "ಆಧ್ಯಾತ್ಮಿಕ ಉಪದೇಶ" ಪಡೆದ ಕಥೆ ಜನಜನಿತವಾಗಿದೆ.

ಬ್ರಹ್ಮಿಷ್ಠನಾದ ಯಾಜ್ಞವಲ್ಕನು ವೇದಾಂತವಾದದಲ್ಲಿ ಜಯಿಸಿದ್ದಕ್ಕಾಗಿ ಸಾವಿರಾರು ಗೋದಾನ ಜನಕನು ನೀಡಿದ ಬಗ್ಗೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಉಲ್ಲೇಖಿಸಿದೆ.

ಮರಣ -- ಗ್ರಹಣಕಾಲದಲ್ಲಿ ಗೋದಾನ ಕೊಡುವ ಪದ್ಧತಿ ಇಂದಿಗೂ ಪ್ರಚಲಿತವಾಗಿದೆ. ಮರಣಾನಂತರ ಗೋದಾನ ಕೊಡುವುದರಿಂದ ಸಕಲ ಪಾಪಪರಿಹಾರ -- ಸ್ವರ್ಗಪ್ರಾಪ್ತಿ ಎಂದು ಹಿಂದುಗಳ ಅಚಲವಾದ ನಂಬಿಕೆ. ಅದೇರೀತಿ ಗೋವನ್ನು ರಕ್ಷಿಸಿದರೆ ಧನಪ್ರಾಪ್ತಿ ಎಂದು ಸ್ಕಂದಪುರಾಣದಲ್ಲಿ ಹೇಳಿದೆ.

## ಗೋದಾನಕ್ಕೆ ಎಂಥ ಗೋವು ಶ್ರೇಷ್ಠ?

ದಾನಕ್ಕೆ ಬಂದ ಹಸುವನ್ನು ಹಲ್ಲು ಹಿಡಿದು ನೋಡಿದ ಹಾಗೆ ಎಂದು ಗಾದೆಯೇ ಇದೆ. ದಾನ ಎಂದಾಗ ಪಿತಕ್ಕೂ ಬಾರದ, ಕೆಟ್ಟಚಾಳಿ ಹೊಂದಿರುವ ಹಸುಗಳನ್ನೇ ಕೊಡುವ ಜನರಿದ್ದಾರಾದರೂ ಅದು ಸರಿಯಲ್ಲ. ಗೋದಾನ ಕೊಡುವಾಗ ಬಹಳ ಹಾಲನ್ನು ಹಿಂಡುವ ಸುಲಕ್ಷಣ, ಸನ್ನಡತೆಯ ಲಕ್ಷಣವುಳ್ಳ -- ಕರು ಸಮೇತ ದಾನ ಕೊಡಬೇಕು.

ತನ್ನ ಮೊಲೆಹಾಲನ್ನು ತಾನೇ ಕುಡಿಯುವ, ಹೊಟ್ಟೆಗೆ ಹಾಕಿದಷ್ಟೂ ತಿನ್ನುವ, ಬಾಲ್ಯಾವಸ್ಥೆಯಲ್ಲಿಯೇ ಗರ್ಭಧರಿಸಿದ ಗೋವನ್ನು ಎಂದೂ ದಾನ ಮಾಡಬಾರದೆಂದು ಬ್ರಹ್ಮಪುರಾಣ ತಿಳಿಸುತ್ತದೆ.

ಹತ್ತು ಗೋದಾನ ಮಾಡಿದರೆ ಗೋಲೋಕ ಪ್ರಾಪ್ತಿ, ನೂರು ಗೋದಾನ ಮಾಡಿದರೆ ಬ್ರಹ್ಮಸ್ಥಾನ ಪ್ರಾಪ್ತಿ ಎಂದೂ, ಅಪಾತ್ರರಿಗೆ ದಾನ ಮಾಡಿದರೆ ನರಕ ಪ್ರಾಪ್ತಿ ಎಂದೂ ಇದೆ. ಇಂಥಿಂಥ ಕಾರ್ಯಕ್ಕೆ ಇಂತಿಂಥ ಗೋವು ಆಗಬೇಕೆಂದೂ ಪ್ರತಿಯೊಂದು ಬಣ್ಣದ ಗೋವು ಆಯಾಯ ದಾನಕ್ಕೆ ಶ್ರೇಷ್ಠವೆಂದೂ ತಿಳಿದವರು ಹೇಳಿದ್ದಾರೆ.

## ಗೋದಾನ ಕೊಡುವ ಬಗೆ :

ಗೋದಾನ ಮಾಡುವ ಋತ್ವಿಜರು ಗೋವನ್ನು ಶುಚಿಯಾಗಿ ಮೈತೊಳೆಸಿ, ಗಂಧ -- ಪುಷ್ಪ, ಧೂಪ -- ದೀಪ, ಹೂಗಳಿಂದ ಪೂಜಿಸಿ -- ವಸ್ತ್ರಹೊದಿಸಿ -- ಆಯಾಯ ಅಂಗಗಳ ದೇವತೆಗಳನ್ನು ಸ್ತುತಿಸಿ, ಸ್ಮರಿಸಿ ಗೋಗ್ರಾಸ ಕೊಟ್ಟು ಕರುವಿನ ಸಮೇತ ಹಾಲುಕರೆಯುವ ಕಂಚಿನ ಲೋಟ ಮತ್ತು ಆಹಾರ ಕೊಡುವ ಬಾನಿ ಎಲ್ಲವನ್ನೂ ಸತ್ಪಾತ್ರರಿಗೆ ದಾನಮಾಡಬೇಕು. ಪೂರ್ವಾಭಿಮುಖವಾಗಿರುವ ಗೋವಿನ -- ಕರುವಿನ ಬಾಲವನ್ನು ತುಪ್ಪದ ಪಾತ್ರೆಯಲ್ಲಿಟ್ಟು ದಾನ ಪಡೆಯುವವರನ್ನು ಉತ್ತರಾಭಿಮುಖವಾಗಿ ಕೂರಿಸಿ ಎಳ್ಳು -- ದರ್ಭೆಯೊಂದಿಗೆ ನೀರುಬಿಟ್ಟು ದಾನ ಕೊಡಬೇಕು.

## ಗೋವು ಮಂಗಳಕರವೂ -- ಶುಭಕರವೂ ಹೌದು !

ಜಗದ್ವಿಖ್ಯಾತ ಶ್ರೀಕೃಷ್ಣನು ಗೋವುಗಳನ್ನು ಕಾಯುತ್ತಿದ್ದರಿಂದ ಗೋಪಾಲಕ ಎಂದೇ ಹೆಸರು ಪಡೆದವನು. ಕೃಷ್ಣನ ಕೊಳಲಿನ ನಾದಕ್ಕೆ ಗೋವುಗಳು ಮೇಯುವುದನ್ನು ಮರೆಯುತ್ತಿದ್ದವಂತೆ. ಬೆಳಗ್ಗೆ ಎದ್ದೊಡನೆ "ಗೋಗ್ರಾಸ" ಕೊಟ್ಟು ಗೋವಿಗೆ ನಮಸ್ಕರಿಸಿದರೆ ಅಂದಿನ ದಿನಪೂರ್ತಿ ಶುಭವನ್ನೇ ಕಾಣಬಹುದು. ಮಂಗಲ ಕಾರ್ಯಕ್ಕಾಗಿ ಎಲ್ಲಿಗಾದರೂ ಹೊರಟರೆ ಎದುರಿಗೆ ಗೋದರ್ಶನವಾದರೆ ಶುಭ ಸೂಚಕವೆಂದು ಹೇಳುತ್ತಾರೆ. ಹೊಸಮನೆ ಪ್ರವೇಶದಂದು ಶುಭಮುಹೂರ್ತದಲ್ಲಿ ಕರುಸಹಿತ

## ಪ್ರತಿಯೊಂದು ಅವಯವದಲ್ಲೂ ದೇವತೆಗಳ ನೆಲವೀಡು :---

| ಅವಯವಗಳು | ನೆಲೆಸಿರುವ ದೇವತೆಗಳು | ಅವಯವಗಳು | ನೆಲೆಸಿರುವ ದೇವತೆಗಳು |
|---|---|---|---|
| ಕೋಡಿನ ತುದಿ. | ಎಲ್ಲಾ ತೀರ್ಥಗಳು. | ಕಣ್ಣು. | ಸೂರ್ಯ, ಚಂದ್ರ. |
| ಕೋಡಿನ ಬುಡ. | ಬ್ರಹ್ಮ ಮತ್ತು ವಿಷ್ಣು. | ಹಲ್ಲುಗಳು. | ವಾಯು. |
| ಹಣೆ ಕೆಳಭಾಗ. | ಮಹಾದೇವ. | ನಾಲಿಗೆ. | ವರುಣ. |
| ಹಣೆ ಮೇಲ್ಭಾಗ. | ಪಾರ್ವತಿ. | ಹುಂಕಾರ. | ಸರಸ್ವತೀ. |
| ಮೂಗಿನ ಹೊಳ್ಳೆಗಳು. | ಷಣ್ಮುಖ. | ಕಪೋಲಗಳು. | ಯಮ, ಧರ್ಮ. |
| ಕಿವಿಗಳು. | ಅಶ್ವಿನೀದೇವತೆಗಳು. | ಗೋಮೂತ್ರ. | ಗಂಗೆ. |
| ಹಾಲು. | ಸರಸ್ವತೀನದಿ. | ಎಲ್ಲಾ ಕೀಲುಗಳು. | ವಸುಗಳು. |
| ಮೊಸರು. | ನರ್ಮದಾನದಿ. | ಸೊಂಟ. | ಪಿತೃಗಳು. |
| ತುಪ್ಪ. | ಅಗ್ನಿ. | ಬಾಲ. | ಸೋಮ. |
| ತುಟಿಗಳು. | ಹಗಲು ರಾತ್ರಿಗಳು. | ಬಾಲದ ಕೂದಲು ಮತ್ತು | ಸೂರ್ಯರಶ್ಮಿಗಳು, ಮುವತ್ಮೂರು |
| ಕುತ್ತಿಗೆ. | ಇಂದ್ರ. | ರೋಮಗಳಲ್ಲಿ. | ಕೋಟಿ ದೇವತೆಗಳು. |
| ಹೊಟ್ಟೆ. | ದೇವತೆಗಳ ಅನುಚರರಾದ | ಹೊಟ್ಟೆ. | ಭೂಮಿ. |
| | ಯಕ್ಷರು, ರಕ್ಷರು. | ಕೆಚ್ಚಲುಗಳು. | ಸಾಗರಗಳು. |
| ನಾಲ್ಕು ಕಾಲುಗಳು. | ಸತ್ಯ, ದಯೆ, ತಪಸ್, ಶೌಚ. | ಎದೆ. | ದೇವತಾಗಣ. |
| | | ಮಧ್ಯೆಕಾಲಿನ ಗೊರಸಿನಲ್ಲಿ. | ಗಂಧರ್ವರು. |
| | | ತುದಿ. | ನಾಗರು. |
| | | ಬದಿ. | ಅಪ್ಸರರು. |
| | | ಹಿಂಭಾಗ. | ಹನ್ನೊಂದು ರುದ್ರರು. |

ಗೋವನ್ನು ಮನೆ ಒಳಗೆಲ್ಲಾ ಓಡಾಡಿಸಿ ಅದು ಓಡಾಡಿದ ಸ್ಥಳವನ್ನು ಪವಿತ್ರಸ್ಥಳವೆಂದು ಆನಂದಿಸುತ್ತಾರೆ. ಅದೇರೀತಿ ಮುಹೂರ್ತದಲ್ಲಿ "ಗೋಧೂಳಿ" ಮುಹೂರ್ತ ಶ್ರೇಷ್ಠವಾದದ್ದೆಂದು ಪ್ರತೀತಿ ಇದೆ.

ರಾಮನು ಕಾಡಿಗೆ ಹೋದ ಸಮಯದಲ್ಲಿ ಭರತನು ಕೌಸಲ್ಯೆಗೆ ಹೇಳುತ್ತಾನೆ "ಅಣ್ಣನು ಕಾಡಿಗೆ ಹೋಗುವುದು ನಮಗೆ ಸಮ್ಮತವಾದರೆ ಗೋವಿಗೆ ಒದೆದ ಪಾಪ ನನಗೆ ಬರಲಿ" ಎನ್ನುವ ವಾಕ್ಯವನ್ನು ಗಮನಿಸಿದರೆ ಗೋವನ್ನು ಕಾಲಿನಿಂದ ಒದೆದರೆ ಮಹಾಪಾಪವೆಂಬ ಅರ್ಥ ಬರುವುದು.

"ಗೋಪದ್ಮವ್ರತ", "ಪಯೋವ್ರತ" ಮುಂತಾದ ವ್ರತಾಚರಣೆಯಲ್ಲಿ ಗೋವಿನ ಹಾಲನ್ನು ಮಾತ್ರ ಕುಡಿದು ಅನುಷ್ಠಾನಗಳನ್ನು ಮಾಡುವ ವಿಧಿಯನ್ನು ಭಾಗವತದಲ್ಲಿ ಹೇಳಿದೆ--

"ಯತ್ ತ್ವಗಸ್ಥಿಗತಂ ಪಾಪಂ
ದೇಹೇ ತಿಷ್ಠತಿ ಮಾಮಕಂ
ಪ್ರಾಶನಂ ಪಂಚಗವ್ಯಸ್ಯ
ದಹತು ಅಗ್ನಿರಿವ ಇಂಧನಂ

ಪಾಪಗಳಿಗೆ ಪ್ರಾಯಶ್ಚಿತ್ತವಾಗಿ ಹಸುವಿನ ಸಗಣಿ, ಗಂಜಲ, ಹಾಲು, ಮೊಸರು, ತುಪ್ಪದಿಂದ ತಯಾರಿಸಿದ ಪಂಚಗವ್ಯ ಪ್ರಾಶನವನ್ನು ಸಾಧಕನು ವ್ರತ ನಿರತನಾಗಿ ಬರಿಯಹೊಟ್ಟೆಗೆ ಮುತ್ತುಗ ಅಥವಾ ಹಲಸಿನ ಎಲೆಯನ್ನು ಚಮಚದಂತೆ ಮಾಡಿಕೊಂಡು ಮೇಲಿನ ಮಂತ್ರ ಪಠಿಸುತ್ತಾ ಮೂರು ಸಲ ಹೇಳಿ ಕುಡಿಯಬೇಕು. ಅಶುಚಿ, ಸೂತಕ ಮುಂತಾದ ಸಂದರ್ಭದಲ್ಲಿ ಪಂಚಗವ್ಯ ಸೇವನೆ ಅತಿಮಹತ್ವದಾಗಿದೆ. ಆಷಾಢ ಶುದ್ಧದ್ವಾದಶಿಯನ್ನು "ಪಂಚಗವ್ಯ ದ್ವಾದಶಿ" ಎಂದು ಆಸ್ತಿಕರು ಆಚರಿಸುತ್ತಾರೆ.

ಪಂಚಾಮೃತ ಅಭಿಷೇಕ ವಿಧಿಯಲ್ಲಿ--

"ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ
ಸೋಮ ವೃಷ್ಣಿರ್ಯಂಭವಾ ವಾಜಸ್ಯ ಸಂಗಥೇ
ಕ್ಷೀರ ಸ್ನಾನಂ ಸಮರ್ಪಯಾಮಿ"

ಎಂದು ಹಾಲಿನಿಂದಲೂ, ಅದೇರೀತಿ ದಧಿಸ್ನಾನವನ್ನು ಮಂತ್ರ ಸಹಿತ ಪಠಿಸಿ ಅಭಿಷೇಕ ಕಾರ್ಯ ಮುಗಿಸುತ್ತಾರೆ.

ಹಿಂದುಗಳು ನಿತ್ಯಪಾರಾಯಣ ಮಾಡುವ ದಶ ಶಾಂತಿಮಂತ್ರದಲ್ಲಿ ಗೋಶಾಂತಿಃ ಎಂಬ ಮಂತ್ರದಲ್ಲಿ ಹಸುಗಳೂ ಶಾಂತಿಯಿಂದಿರಲಿ ಎಂದು ಪ್ರಾರ್ಥನೆ ಮಾಡಲಾಗುತ್ತದೆ.

## ಹಸುವಿನಿಂದಾಗುವ ಪ್ರಯೋಜನಗಳು :

ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ
ಸುಟ್ಟರೆ ನೊಸಲಿಗೆ ವಿಭೂತಿಯಾದೆ............

ಎಂಥ ಸುಂದರವಾದ ಪದ್ಯ! ಹಸುವಿನಿಂದ ನಾವು ಪಡೆಯುವ ಬಹುವಿಧವಾದ, ಬಹುಮುಖವಾದ ಪ್ರಯೋಜನಗಳು ಒಂದಲ್ಲ ಎರಡಲ್ಲ. ಹಾದಿ ಬೀದಿಯಲ್ಲಿರುವ ಕಸದ ಹುಲ್ಲನ್ನು ಮೇದೋ ಅಥವಾ ನಾವೇ ಕೊಡುವ ಹುಲ್ಲು, ನೀರಿನಿಂದ ನಮಗೆ ಪೌಷ್ಠಿಕಾಂಶದಿಂದ ಕೂಡಿದ ಶುದ್ಧವಾದ ಸಾತ್ವಿಕ ಹಾಲನ್ನು ಕೊಟ್ಟು ಆಯಸ್ಸು, ಆರೋಗ್ಯ ಚಿತ್ತ ಸ್ವಾಸ್ಥ್ಯ, ಬುದ್ಧಿಮತ್ತೆಯನ್ನು ವೃದ್ಧಿಸುತ್ತದೆ.

ಮೊಸರು, ಬೆಣ್ಣೆ, ಕಡೆದ ಮಜ್ಜಿಗೆಗಳಲ್ಲೂ ಸಹ ವೈದ್ಯಕೀಯ ಗುಣಗಳುಂಟು. ಕೆಲವು ಗೋವಿನ ಹೊಟ್ಟೆಯಲ್ಲಿ ಸಿಗುವ "ಗೋರೋಜನ" ವೈದ್ಯಕೀಯ ಶಾಸ್ತ್ರದಲ್ಲಿ ಉತ್ತಮ ಮದ್ದೂ ಕೂಡ. ತನ್ನ ಆಯಸ್ಸು ಮುಗಿದ ಮೇಲೂ ತನ್ನ ಚರ್ಮವನ್ನು ರಾಯರಕಾಲಿಗೆ ಮುಳ್ಳೊತ್ತುವಾಗಿಯೂ ಲಯಬದ್ಧವಾಗಿ ಬಡಿದರೆ ಮಧುರಗಾನದ ಭೇರಿ ನಗಾರಿಗಳಾಗಿಯೂ ಬಳಸಲು ಸಹಾಯ ಮಾಡುತ್ತದೆ. ಎಲುಬು, ಚರ್ಮಗಳು ಕೈಗಾರಿಕಾ ಮೂಲವಸ್ತುಗಳಾಗಿ ಬೆಲೆಬಾಳುತ್ತವೆ.

ಎಮ್ಮೆ ಹಸು, ಎತ್ತುಗಳ ಸಗಣಿಗಳೇ ನಮ್ಮ ಗೊಬ್ಬರದ ಮೂಲ ವಸ್ತುಗಳು. ಇಂಧನ ಅಭಾವದ ಇಂದಿನ ದಿನಗಳಲ್ಲಿ ಗೊಬ್ಬರ ಅನಿಲದಿಂದ ಸೌದೆಯ ಅಭಾವವನ್ನು ನೀಗಿಸಿಕೊಳ್ಳಬಹುದಾಗಿದೆ.

ಗೋವಿನ ಬಗ್ಗೆ ಹಿಂದೂಗಳಲ್ಲಿ "ಗಾವೋ ವಿಶ್ವಸ್ಯ ಮಾತರಃ" ಎಂಬ ಶ್ರದ್ಧೆ ಇದ್ದರೂ ಕೂಡ ಹೊರಗಿನ ಆಕ್ರಮಣ ಕಾರರು ಬಂದಾಗ ಗೋಹತ್ಯೆ ನಮ್ಮ ದೇಶದಲ್ಲಿ ಪ್ರಾರಂಭವಾಯಿತು. ಸ್ವಾತಂತ್ರ್ಯ ಬಂದು ರಾಜ್ಯಾಂಗ ರಚನೆಯಾದಾಗ "ರಾಜ್ಯದ ನೀತಿ ನಿರ್ದೇಶನಗಳು" ಎಂಬ ವಿಭಾಗದಲ್ಲಿ ಗೋಸಂರಕ್ಷಣೆ ಬಗ್ಗೆ ಕೆಲವು ಅಂಶ ಸೇರಿವೆ. ಕೆಲವು ವರ್ಷದ ಹಿಂದೆ ಮಳೆಯೇ ಇಲ್ಲದೆ ಎಲ್ಲೆಲ್ಲೂ ಬರಗಾಲ ಬಂದಾಗ ಮಳೆ ಇದ್ದಕಡೆ ಕೆಲವು ಸಂಘ ಸಂಸ್ಥೆಗಳು -- ಮಠಾಧಿಪತಿಗಳು ಗೋರಕ್ಷಣೆಗಾಗಿ ಶ್ರಮಿಸಿ ಬರಗಾಲ ಬಂದ ಕಡೆಯಿಂದ ಗೋವನ್ನು ವಲಸೆ ಬರುವಂತೆ ಮಾಡಿ ಸಾಕಿದ ನಿದರ್ಶನಗಳು ಇತ್ತೀಚೆಗೆ ಸಂಭವಿಸಿದೆ.

ಹಸು ಶಾಂತಿ ಸಮಾಧಾನದ ಸಂಕೇತ. ಭಾರತದಲ್ಲಿ ಬಹುತೇಕ ಬೇಸಾಯವೇ ಮುಖ್ಯವಾಗಿರುವುದರಿಂದ ದೀಪಾವಳಿಯಂದು ಗೋವಿಗೆ ಪ್ರಾಶಸ್ತ್ಯ ಕೊಟ್ಟು ಗೋಪೂಜೆ ಆಚರಿಸುತ್ತಾರೆ.

ಹಸಿರು ಕ್ರಾಂತಿ -- ಕ್ಷೀರಕ್ರಾಂತಿಯ ಈ ಯುಗದಲ್ಲಿ ಹಾಲಿಗಾಗಿಯೇ ಸಾಕುವ ೯೬೦ ತಳಿಗಳು ತಯಾರಾಗಿದೆಯಂತೆ. ಅತ್ಯುತ್ತಮ ತಳಿಯ ಹಸುವಿನಿಂದ ವರ್ಷದಲ್ಲಿ ಮುನ್ನೂರು ಇಪ್ಪತ್ತು ದಿನಗಳೂ ಹಾಲನ್ನು ಹಿಂಡುವುದನ್ನು ಕಾಣಬಹುದಾಗಿದೆ. ತನ್ನ ಇಪ್ಪತ್ತು ವರ್ಷದ ಜೀವಿತಾವಧಿಯಲ್ಲಿ ಹಸು ಹನ್ನೆರಡರಿಂದ ಹದಿಮೂರು ವರ್ಷ ಹಾಲನ್ನು ಕೊಡುತ್ತದೆ. ಪ್ರತಿ ವರ್ಷ ಒಂದು ಕರುವನ್ನು ಈಯುವುದಾದರೂ ಅಪರೂಪಕ್ಕೊಮ್ಮೆ ಅವಳಿ -- ತ್ರಿವಳಿ ಕರುಗಳನ್ನು ನೀಡುವುದು ಇದೆ.

ವಸಿಷ್ಠ -- ವಿಶ್ವಾಮಿತ್ರರ ಕಾಲದಿಂದಲೂ ಮಹತ್ವ ಪಡೆಯುತ್ತ ಬಂದಿರುವ ಗೋಮಾತೆ ಭಾರತೀಯರ ಜನಜೀವನದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಮಾನವ ಯಂತ್ರಲೋಕಕ್ಕೇ ಹೋಗಲೀ ಅಥವಾ ಆಧುನಿಕ ಟ್ರಾಕ್ಟರುಗಳಿಂದ ಸಾವಿರಾರು ಎಕರೆ ಉತ್ತುಬಿತ್ತಲಿ, ಗೋವಿನ ಪ್ರಾಮುಖ್ಯ ಮಾತ್ರ ಬಹುಶಃ ಎಂದೆಂದೂ ಕಡಿಮೆಯಾಗುವುದಿಲ್ಲ.

ಮಾನವನಿಗೆ ಸರ್ವವಿಧದಲ್ಲಿಯೂ ಸಹಕಾರಿಯಾದ ಗೋವಿನ ಈ ಪ್ರಶ್ನೆಗೆ ನಾವೆಂಥ ಉತ್ತರ ಕೊಡಲು ಸಾಧ್ಯ? "ನೀನಾರಿಗಾದೆಯೋ ಎಲೆ ಮಾನವ".



# ಸಂತ ರೈದಾಸ

---ಡಾ|| ಎ. ಜಾನಕಿ.

ನಿಮ್ನ ಜಾತಿಯಲ್ಲಿ ಜನ್ಮವೆತ್ತಿದರೂ ತಮ್ಮ ಅಮೋಘವೂ ಅತ್ಯದ್ಭುತವೂ, ಅಸದೃಶವೂ ಆದ ಮಾಯೆಯ ಪರಿತ್ಯಾಗದಿಂದ ಸಂತ ರೈದಾಸರು ತಮ್ಮ ಕಾಲದಲ್ಲೇ ಸದಾಚಾರಿಗಳಾದ ಬ್ರಾಹ್ಮಣರ ಕೇವಲ ಗೌರವಕ್ಕಷ್ಟೇ ಅಲ್ಲ ವಂದನೆಗೂ ಪಾತ್ರರಾದರು. ಈ ಕೆಳಗಿನ ಪದದಿಂದ ಈ ಅಂಶ ಸ್ಪಷ್ಟವಾಗುತ್ತದೆ.

ಮೇರೀ ಜಾತಿ ಕುಟ ದಾಂ ಢರಾ ಢೋರ್
ಢೋವತಾ ನಿತಹಿ ಬಾನಾರಸೀ ಆಸಪಾಸಾ
ಅಟ ವಿಪ್ರ ಪರಧಾನ ತಿಹಿ ಕರಹಿ ಡಂಡಉತಿ
ತೇರೆ ನಾಮ್ ಸರಣಾಈ ರವಿದಾಸುದಾಸಾ

ಆ ದಿನಗಳಲ್ಲಿ ರೈದಾಸರು ಭಕ್ತ ಶ್ರೇಷ್ಠರೆಂದೂ, ಮಹಾತ್ಮರೆಂದೂ ಪರಿಗಣಿಸಲ್ಪಟ್ಟಿದ್ದರು. ಇವರ ಬಾಲ್ಯದ ಕೆಲವು ಚಮತ್ಕಾರಿಕ ಘಟನೆಗಳು ಇಂದಿಗೂ ಜನರಲ್ಲಿ ಪ್ರಸಿದ್ಧವಾಗಿವೆ. ಕೆಲವು ವಿದ್ವಾಂಸರು ಇವುಗಳು ದಂತ ಕಥೆಗಳು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಜನ್ಮದಿಂದಲೇ ಇವರ ಶರೀರದಲ್ಲಿ ಯಜ್ಞೋಪವೀತ ಕಂಡುಬಂದಿತೆಂದೂ, ಇವರು ಪೂರ್ವಜನ್ಮದಲ್ಲಿ ಬ್ರಾಹ್ಮಣರೇ ಆಗಿದ್ದರೆಂದೂ, ಈ ಜನ್ಮದಲ್ಲಿ ಪರಮ ಭಕ್ತರಾದ ರೈದಾಸರನ್ನು ವಿರೋಧಿಗಳು ಅಪಮಾನಪಡಿಸಲೆತ್ನಿಸಿದಾಗ ಚರ್ಮದ ಕೆಳಗಿದ್ದ ಯಜ್ಞೋಪವೀತವನ್ನು ನೋಡಿ ದಿಗ್ಭ್ರಮಿತರಾಗಿ ತಮ್ಮ ಜಘನ್ಯಕೃತ್ಯಕ್ಕೆ ಲಜ್ಜೆಗೊಂಡು ಇವರಲ್ಲಿ ಕ್ಷಮೆ ಯಾಚಿಸಿದರೆಂದು ತಿಳಿದುಬಂದಿದೆ. ಬಾಲ್ಯದ ಮತ್ತೊಂದು ಘಟನೆ ಈ ರೀತಿ ಇದೆ. ನಾಭಾದಾಸರ ಭಕ್ತಿಮಾಲದ ಟೀಕಾಕಾರರಾದ ಪ್ರಿಯದಾಸರು ಈ ಘಟನೆಯನ್ನು ಉಲ್ಲೇಖಿಸಿದ್ದಾರೆ. ಚಮ್ಮಾರರ ವಂಶದಲ್ಲಿ ಜನ್ಮವೆತ್ತಿದ ಶಿಶು, ಸ್ವಾಮಿ ರಾಮಾನಂದರ ಉಪದೇಶದ ನಂತರವೇ ತಾಯಿಯ ಸ್ತನ್ಯಪಾನಮಾಡಿತಂತೆ. ಈ ಎಲ್ಲಾ ಘಟನೆಗಳೂ ಸಂತ ರೈದಾಸರು ಶ್ರೇಷ್ಠ ಮಟ್ಟದ ಸಂತರೂ, ಭಕ್ತರೂ, ಮಹಾತ್ಮರೂ ಆಗಿದ್ದರೆಂಬುದನ್ನು ಸ್ಥಿರಪಡಿಸುತ್ತವೆ.

ತಮ್ಮ ಜಾತಿಯ ವ್ಯವಸಾಯವನ್ನು ಪೂರ್ಣ ನಿಷ್ಠೆಯಿಂದ ಮಾಡುತ್ತಿದ್ದ ರೈದಾಸರು ಅದನ್ನು ತಮ್ಮ ಜೀವಿಕೆಯಂದೇ ಭಾವಿಸಿದ್ದರು. ಭಕ್ತರೆಂದು ಪ್ರಸಿದ್ಧಿ ಪಡೆದರೂ ಅವರು ತಮ್ಮ ವ್ಯವಸಾಯವನ್ನು ತ್ಯಜಿಸಲಿಲ್ಲ. ಸ್ವಧರ್ಮದಲ್ಲಿ ಅವರಿಗೆ ಅಪರಿಮಿತವಾದ ನಿಷ್ಠೆ ಮತ್ತು ನಂಬಿಕೆ. ತಮ್ಮ ಈ ವ್ಯವಸಾಯದ ಸಂಪಾದನೆಯಿಂದಲೇ ತಮ್ಮ ಕುಟುಂಬದ ಪೋಷಣೆ ಮಾಡುತ್ತಿದ್ದರು. ಬಾಲ್ಯದಿಂದಲೇ ಸತ್ಸಂಗದಲ್ಲಿ ಇವರಿಗೆ ವಿಶೇಷವಾದ ಆಸಕ್ತಿ, ೧೨ ವರ್ಷದವರಾಗಿದ್ದಾಗ ಮಣ್ಣಿನ ರಾಮಜಾನಕಿಯ ವಿಗ್ರಹವನ್ನು ಪೂಜಿಸಲಾರಂಭಿಸಿದರು. ಅನಂತರ ಭಗವಂತನ ಧ್ಯಾನದಕಡೆ ಆಕರ್ಷಿತನಾಗುತ್ತಿದ್ದ ಮಗುವನ್ನು ಕಂಡು ಅವನ ಮುಂದಿನ ಭವಿಷ್ಯದ ಬಗೆಗೆ ಚಿಂತಿಸುತ್ತಾ ಮನವನ್ನು ಪ್ರಾಪಂಚಿಕ ವ್ಯವಹಾರಗಳ ಕಡೆ ಎಳೆಯಲು ಅಸಮರ್ಥರಾದ ಅವರ ತಂದೆ ಕೊನೆಗೆ ಮಗನನ್ನು ತಮ್ಮಿಂದ ದೇರ್ಪಡಿಸಿದರು. ಅಂದಿನಿಂದ ರೈದಾಸರು ತಮ್ಮ ಪೈತೃಕ ಮನೆಯ ಹಿಂಭಾಗದಲ್ಲಿ ಒಂದು ಗುಡಿಸಿಲನ್ನು ಕಟ್ಟಿಕೊಂಡು ಅಲ್ಲೇ ವಾಸಿಸುತ್ತಾ ತಮ್ಮ ಜೀವಿಕೆ ನಡೆಸಲಾರಂಭಿಸಿದರು. ಸ್ವಭಾವತಃ ನಿಸ್ಪೃಹರೂ, ಪರಮ ಉದಾರಿಗಳೂ, ದಯಾಳುವೂ ಆದ ರೈದಾಸರು ತಾವು ತಯಾರಿಸಿದ ಚಪ್ಪಲಿಗಳನ್ನು ಸಾಧುಸಂತರಿಗೆ ತೊಡಿಸಿ ಸಂತುಷ್ಟರಾಗುತ್ತಿದ್ದರು. ಇವರ ನಿಸ್ಪೃಹತೆ ಈ ಕೆಳಗಿನ ಘಟನೆಯಿಂದ ಸ್ಪಷ್ಟಪಡುತ್ತವೆ. --ಒಂದು ದಿನ ಒಬ್ಬ ಸಾಧುವು ರೈದಾಸರಿಗೆ ಸ್ಪರ್ಶಮಣಿಯನ್ನು ತಂದು ಕೊಟ್ಟು, ಇವರು ಉಪಯೋಗಿಸುತ್ತಿದ್ದ ಕಬ್ಬಿಣದ ಉಪಕರಣಗಳನ್ನು ಚಿನ್ನವನ್ನಾಗಿ ಪರಿವರ್ತಿಸಿ ಅದರ ಉಪಯೋಗವನ್ನು ತಿಳಿಸಿಕೊಟ್ಟನಂತೆ. ಆದರೆ ರೈದಾಸರು ಆ ಬಹುಮೂಲ್ಯ ಮಣಿಯನ್ನು ತಿರಸ್ಕರಿಸಿದರೆಂದೂ, ಆತ ಬಹಳ ಒತ್ತಾಯಿಸಲು ಮನೆಯ ಗೋಡೆಯಲ್ಲಿ ಇಡುವಂತೆ ತಿಳಿಸಿದರಂತೆ. ೧೩ ತಿಂಗಳುಗಳ ನಂತರ ಬಂದ ಸಾಧುವು ಆ ಸ್ಪರ್ಶಮಣಿಯ ಬಗ್ಗೆ ಪ್ರಸ್ತಾವಿಸಲು ರೈದಾಸರು ಕೊಟ್ಟ ಉತ್ತರ-- "ನೀವೇ ಹೋಗಿ ನೋಡಿ, ಎಲ್ಲಿಟ್ಟಿತ್ತೋ ಅಲ್ಲಿಯೇ ಬಿದ್ದಿರಬಹುದು". ಎಂಥಹ ನಿಸ್ಪೃಹತೆ.

ಮೀರಾಬಾಯಿಯವರು ತಮ್ಮ ಪದಗಳಲ್ಲಿ ರೈದಾಸರನ್ನು ತಮ್ಮ ಗುರುಗಳೆಂದು ಸ್ವೀಕರಿಸಿದ್ದಾರೆ. "ಗುರು ಮಿಲಯಾ ರೈದಾಸಜೀ ದೀನ್‌ದೀ ಜ್ಞಾನ್‌ಕೀ ಗುಟಕೀ" ಮತ್ತು "ರೈದಾಸ ಸಂತ ಮಿಲೆ ಯೊಹಿ ಸತ್‌ಗುರು, ದೀನ್‌ಹಾ ಸುರತ ಸಹದಾನೀ" ಈ ವಾಕ್ಯಗಳಲ್ಲಿ ದೀಕ್ಷಾಗುರು ಎಂದಿದ್ದಾರೆ. ಪ್ರಸಿದ್ಧ ಚಿತ್ತೌಡದ ಮಹಾರಾಣಿಯಾದ 'ಝಾಲೀರಾಣಿ' ಯವರು ಇವರ ಪ್ರಮುಖ ಶಿಷ್ಯೆಯರಲ್ಲೊಬ್ಬರು. ಝಾಲೀರಾಣಿಯವರು ರೈದಾಸರ ದರ್ಶನಕ್ಕಾಗಿ ಕಾಶಿಗೆ ಆಗಮಿಸಿ ಇವರ ಶಿಷ್ಯತ್ವವನ್ನು ಸ್ವೀಕರಿಸಿದರೆಂದೂ ಪುನಃ ಚಿತ್ತೌಡಿಗೆ ಹೋಗಿ ರವಿದಾಸರನ್ನು ಅಲ್ಲಿಗೆ ಬರಬೇಕೆಂದು ನಿಮಂತ್ರಣ ಕಳುಹಿಸಿದರೆಂದೂ ಪ್ರತೀತಿ ಇದೆ. ಅಲ್ಲಿ ರೈದಾಸರು ಪರಮ ಯೋಗಿಗಳೆಂಬುದು ದೃಢಪಟ್ಟಿತಂತೆ. ಪೂಜಾಗೃಹದಲ್ಲಿದ್ದ ದೇವರ ಮೂರ್ತಿಯನ್ನು ತಮ್ಮೆಡೆಗೆ ಆಕರ್ಷಿಸಿಕೊಂಡು, ಪ್ರತಿಭಾಶಾಲಿಗಳಾದ ಬ್ರಾಹ್ಮಣರನ್ನು ಶಾಸ್ತ್ರಾರ್ಥಗಳನ್ನು ಪರಾಜಯಗೊಳಿಸಿ, ಭೋಜನ ಮಾಡುತ್ತಿದ್ದ ಅನೇಕ ಬ್ರಾಹ್ಮಣರಿಗೆ ಅವರ ಜೊತೆ ಇವರ ಉಪಸ್ಥಿತಿ ಕಂಡು ಬಂದು, ಅವರುಗಳು ಏಕ ಕಂಠದಿಂದ ರೈದಾಸರನ್ನು ಮಹಾತ್ಮರೆಂದು ಸ್ವೀಕರಿಸಿದ್ದು ತಿಳಿದುಬರುತ್ತದೆ.

ಸಂತರೈದಾಸರಿಂದ ರಚಿತವಾದ ಅನೇಕ ಪದಗಳು ಉಪಲಬ್ಧವಾಗಿವೆ. 'ಆದಿಗ್ರಂಥ' ದಲ್ಲಿ ಅವರ ೪೦ ಪದಗಳು ಸಂಗ್ರಹೀತವಾಗಿವೆ. 'ದೇಲ್‌ವೇ ಡಿಯರ್ ಪ್ರೆಸ್‌ನ ಸಂಗ್ರಹದಲ್ಲೂ ಕೆಲವು ಪದಗಳು ಸಿಕ್ಕಿವೆ. ಇವರ ಸರಲವಾದ ಹೃದಯವಂತಿಕೆ, ದೈನ್ಯತೆ, ಮತ್ತು ಉತ್ಕಟ ಭಗವತ್ ಪ್ರೇಮ ಇವರ ಪದಗಳ ವೈಶಿಷ್ಟವಾಗಿವೆ. ಇವರ ಆತ್ಮನಿವೇದನೆ ಬಹಳ ಸುಂದರವೂ ಸ್ಪಷ್ಟವೂ ಮತ್ತು ಹೃದಯಗ್ರಾಹಿಯೂ ಆದುದು. ಒಂದು ಸಣ್ಣ ಉದಾಹರಣೆ ನೋಡಿ.

ನರಹರಿ ಚಂಚಲ ಹ್ಯೆ ಮತಿ ಮೋರೀ
ಕೈಸೆ ಭಗತಿ ಕರೂಂ ಮ್ಯೆ ತೇರೀ
ತೂ ಮೊಹಿ ದೇಖ್ಯೆ ಮ್ಯೆ ತೊಹಿ ದೇಖೂಂ,
ಪ್ರೀತಿ ಪರಸ್ಪರ ಹೋಈ
ತೊ ಮೊಹಿ ದೇಖ್ಯೆ ತೊಹಿ ನ ದೇಖೂಂ,
ಯಹ ಮತಿ ಸಬ ಬುಧಿ ಖೋಈ
ಸಬ ಘಟ ಅಂತರ ರಮಸಿ ನಿರಂತರ,
ಮ್ಯೆ ದೇಖನ ನಹಿ ಜಾನಾ
ಗುನ ಸಬ ತೇರ ಮೋರ ಸಬ್ ಔಗುನ,
ಕೃತ ಉಪಕಾರ ನ ಮಾನಾ
ಮ್ಯೆ ತೈ ತೋರಿ ಮೋರಿ ಅಸಮಝಿಸೋಂ,
ಕೈಸೆ ಕರಿ ನಿಸ್ತಾರಾ
ಕಹ ರೈದಾಸ ಕೃಸ್ನ ಕರುಣಾಮಯ,
ಜೈ ಜೈ ಜಗತ್ ಆಧಾರಾ

(ಹೇ ನರಹರಿ, ನನ್ನ ಮತಿ ಚಂಚಲ, ನಾನು ನಿನ್ನಲ್ಲಿ ಭಕ್ತಿಯನ್ನು ಹೇಗೆ ಮಾಡಲಿ? ನೀನು ನನ್ನನ್ನು ನೋಡಲು, ನಾನೂ ನಿನ್ನನ್ನು ನೋಡಿದರೆ ಅದು

## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ :
**---ಕಾರ್ಯನಿರ್ವಹಣಾಧಿಕಾರಿ,**
ತಿ.ತಿ.ದೇ. ತಿರುಪತಿ.

ಪರಸ್ಪರ ಪ್ರೀತಿ. ನೀನು ನನ್ನನ್ನು ನೋಡಿ, ನಾನು ನಿನ್ನನ್ನು ನೋಡದಿದ್ದರೆ, ಎಂಥಹ ಮತಿಭ್ರಂಶ? ಪ್ರತಿಯೊಂದು ಜೀವಿಯಲ್ಲೂ ಅಂತರ್ಯಾಮಿಯಾಗಿರುವ ನಿನ್ನನ್ನು ನಾನು ನೋಡದಾದೆ. ನೀನು ಗುಣದ ಗನಿ. ಆದರೆ ನಾನು ಅವಗುಣದ ಖನಿ. ಮಾಡಿದ ಉಪಕಾರವನ್ನು ಮರೆತವ. ನನ್ನ ಉದ್ಧಾರ ಹೇಗೆ ಸಾಧ್ಯ?).

ತೋಹೀ ಮೋಹೀ ಮೋಹೀ ತೋಹೀ
ಅಂತರ ಕೈಸಾ
ಕನಿಕ ಕಟಿಕ ಜಲ ತರಂಗ ಜೈಸಾ
ಜಲುಪೈ ದಮನ ಪಾಪಕರಂತಾ, ಆಹೆ ಅನಂತಾ
ಪತಿತ ಪಾವನ ನಾಮ ಕೈಸೆ ಘಂತಾ
ತುಮ ಜು ನಾ ಇಕ ಆವುಥ ಅನಂತರಜಾಮಿ
ಪ್ರಭತೆ ಜನು ಜಾನೀಜೆ ಜನತೆ ಸುಆಮಿ
ಸರೀರು ಅರಾಧ್ಯೆ ಬೀಕಲು ಬೀಚಾರು ದೇಹೊ
ರವಿದಾಸ ಸಮದಲ ಸಮಝೂವೈ ಕೋವೊ

(ನನ್ನ ನಿನ್ನ ಅಂತರ ಸ್ವರ್ಣ ಮತ್ತು ಸ್ವರ್ಣದ ಬಳೆ, ನೀರು ಮತ್ತು ಅಲೆಯಲ್ಲಿರುವ ಅಂತರ ವಷ್ಟೆ. ನಾನು ಪಾಪ ಮಾಡುತ್ತಲೇ ಇರುವಾಗ ನೀನು ಪತಿತ ಪಾವನನೆಂದು ಹೇಗೆ ಹೇಳಿಸಿಕೊಳ್ಳುತ್ತೀಯಾ? ನನ್ನ ಮುಕ್ತಿಮಾರ್ಗ ನಿನ್ನ ಕೈಯಲ್ಲಿದೆ ನೀನೇ ನನ್ನ ರಕ್ಷಕ, ರಕ್ಷಿಸು.)

ಆತ್ಮನಿವೇದನದ ಈ ಸುಂದರ ಪದದ ವೈಶಿಷ್ಟ್ಯವನ್ನು ನೋಡೋಣ :--

ನೀನು ಪರ್ವತವಾದರೆ ನಾನು ನವಿಲು, ನೀನು ಚಂದ್ರಮನಾದರೆ ನಾನು ಚಕೋರ. ಹೇ ಮಾಧವ, ನೀನು ನಮ್ಮನ್ನು ಬಿಡಬೇಡ, ನಾವೂ ನಿನ್ನನ್ನು ಬಿಡುವುದಿಲ್ಲ. ನೀನು ದೀಪ, ನಾನು ಬತ್ತಿ, ನೀನು ತೀರ್ಥ, ನಾನು ಯಾತ್ರಿ. ನಿಜವಾದ ಪ್ರೀತಿ ನಿನ್ನ ಹತ್ತಿರ ದೆಳೆಸಿ ದೇರೆಯವರಿಂದ ವಿಮುಖರಾದೆವು. ಎಲ್ಲಿಹೋದರೂ ನಿನ್ನ ಸೇವೆಯೇ ಮಾಡುವ ಉದ್ದೇಶ, ನಿನ್ನ ಭಜನೆಯಿಂದ ಯಮಪಾಶದಿಂದ ಮುಕ್ತಿ.

ಪರಮ ಭಕ್ತರಾದ ರೈದಾಸರು ಆ ಭಗವಂತನಲ್ಲಿ ತನ್ನ ಸಮಸ್ಯೆಗಳ ಅರಿಕೆಮಾಡಿಕೊಳ್ಳುತ್ತಾರೆ :--

ತೇರೆ ದೇವ ಕಮಲಾಪತಿ ಸರನ ಆಯಾ
ಮುಝು ಜನಮ ಸಂದೇಹ ಭ್ರಮಛೇದಿ ಮಾಯಾ
ಅತಿ ಅಪಾರ ಸಂಸಾರ ಭವಸಾಗರ,
ಜಾಯೆ ಜನಮ ಮರನಾಸಂದೇಹ ಭಾರೀ
ಕಾಮ ಭ್ರಮ ಕ್ರೋಧ ಭ್ರಮ ಲೋಭಭ್ರಮ
ಮೋಹಭ್ರಮ,
ಅನತ ಭ್ರಮ ಛೇದಿ ಮಯ ಶರಸಿ ಯಾರೀ
ಪಂಚಸಂಗೀ ಮಿಲಿ ಪೀಡಿಯೊ ಪ್ರಾಣಿಯೋಂ,
ಜಾಯ್ ನ ಸವ್ವೋ ವೈರಾಗ ಭಾಗಾ
ಪುತ್ರ ವರನಕುಲಬಂಧು ತೆ ಭಾರಜಾ,
ಭರವೈ ದಸೊ ದಿಸಾ ಸಿರಕಾಲಲಾಣ

ಎಲೈ ಜಗದೀಶನೇ, ನಾನು ನಿನಗೆ ಶರಣು. ಈ ಅಪಾರವಾದ ಭವಸಾಗರದ ಜನ್ಮ ಮರಣದ ಭ್ರಮೆ ನನ್ನನ್ನು ಆವರಿಸಿದೆ. ಕಾಮಭ್ರಮೆ, ಕ್ರೋಧ ಭ್ರಮೆ, ಲೋಭ ಮತ್ತು ಮೋಹ ಭ್ರಮೆಗಳ ಸುಳಿಯಲ್ಲಿ ಸಿಕ್ಕಿ ಒದ್ದಾಡುತ್ತಿದ್ದೇನೆ. ಎಲೈ ನನ್ನ ಸಹಾಯಕ ಮಿತ್ರನೇ, ಈ ಎಲ್ಲಾ ಭ್ರಮೆಗಳನ್ನು ನಿರಸನಗೊಳಿಸಿ ನನ್ನನ್ನು ರಕ್ಷಿಸು. ಇಂದ್ರಿಯಗಳ ದಾಸನಾಗಿ ತೊಳಲುತ್ತಿದ್ದೇನೆ, ವೈರಾಗ್ಯ ಬಹಳ ದೂರಸರಿದಿದೆ. ಭಾರ್ಯಾ, ಪುತ್ರ, ಬಂಧು, ಇವರುಗಳ ಮೋಹ ಹತ್ತು ದಿಕ್ಕುಗಳಿಂದಲೂ ಆವರಿಸಿದೆ. ವ್ಯವಹಾರ ಮತ್ತು ಭಕ್ತಿ ಇವುಗಳ ಮಧ್ಯೆ ದಾರಿಕಾಣದೆ ಬಳಲುತ್ತಿದ್ದೇನೆ. ದಿಕ್ಕುಕಾಣದ ನಾನು ಏನು ಉಪಾಯ ಮಾಡಲಿ? ಪರಮ ಪ್ರಕಾಶಕನೂ, ಪಾಪ ವಿನಾಶಿಯೂ ಆದ ನಿನ್ನನ್ನು ವಿಲೋಕಿಸಿ ನಾನು ವಿರಾಗಿ ಆಗಿದ್ದೇನೆ. ಹೇ ಗೋವಿಂದ ನಿನ್ನ ನಾಮ ಸ್ಮರಣೆಯಲ್ಲಿ ತೊಡಗಿದ್ದೇನೆ.

ಐಕಾಂತಿಕ ನಿಷ್ಠೆ, ಸಾತ್ವಿಕ ಜೀವನ, ದೃಢವಿಶ್ವಾಸ ಮತ್ತು ಆತ್ಮಸಮರ್ಪಣದಿಂದ ತುಂಬಿ ತುಳುಕುತ್ತಿರುವ ಸಂತ ರೈದಾಸರ ಪದಗಳು ನಮ್ಮೆಲ್ಲರಿಗೂ ಎಂದೆಂದಿಗೂ ದಾರಿದೀಪಗಳಾಗಿವೆ.



## ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ
## ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**

# ಶ್ರೀ ವರದ ವಿಠಲ ನಾಮಾವಳ್ಯಷ್ಟಕಮ್

---ವಿ. ಗ. ವೇದೇಶ್ವರ.



ನಾರಾಯಣ, ಪ್ರಭು ವರಪ್ರದ ದೀನನಾಥ,
ದುಷ್ಟಾಂತಕ, ತ್ರಿನಯನ, ಪ್ರಭುವೆಂಕಟೇಶ
ದಾರಿದ್ರ್ಯ ದುಃಖಹರ, ಭೋಃ ಭವದುಃಖಹರ್ತಾ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೧

ಆಧಾರದಾತೃ ಭುವನಾರ್ಕ, ಮನೋಹರೇಶ
ಭೋಃ ದೀನದಿವ್ಯನಯನ, ಪ್ರಣತ ಪ್ರಮೋದ
ಭೋಃ ಭಕ್ತವತ್ಸಲ, ದಯಾಲಯ, ಭಾಗ್ಯದಾತಃ
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೨

ಪ್ರಾಣಪ್ರದ, ಪ್ರಣತದುಃಖಹರ, ಪ್ರವೀಣ,
ಪ್ರೋತ್ತುಂಗದೇವ, ಭಯನಾಶಕ, ಸರ್ವದಾತಃ
ವೈಕುಂಠನಾಥ, ವರದ, ಪ್ರಣೀತಪ್ರಿಯೇಶ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೩

ಸರ್ವೇಶ, ಕೋಟಿರವಿಕಾಂತಿದ, ಸಾರ್ವಭೌಮ,
ಭೋಃ ಸರ್ವಲೋಕಪರಿಪಾಲಕ, ಲೋಕಸಾರ
ಭೋಃ ವಿಶ್ವಸಾರಥಿ ನರೇಶ, ಸುರಾಲಯೇಶ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೪

ಲೋಕಾಧಿಪಾಲಕ ಲಲಾಮ, ಲಯಾಂತಕೇಶ,
ಲಾವಣ್ಯ ಲೋಕಕರ ದೀನಲಲಾಮ, ಬಂಧೋ
ಮಾಯಾವಿಚಿತ್ರ ಭವಸಾಗರ ತಾರಕೇಶ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೫

ವಿದ್ಯಾನಿಧೀಶ, ಶಮಶಾಂತಕರೇಶ, ಶಾಂತ,
ಪಾಶಾಂಕುಶ ಪ್ರಧರ, ಶತ್ರುಭಯಾಂತಕೇಶ
ದುರ್ಬುದ್ಧಿನಾಶಕ, ಕುನೀತನರಾಂತಕೇಶ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೬

ಚಿಂತಾಽಬ್ಧಿತಾರಕ, ಕುಕರ್ಮ ರತಾಂತಕೇಶ,
ದೀನೇಶ, ದಿವ್ಯವರದಾತೃ ದಯಾನಿಧೀಶ
ದೀನಪ್ರಿಯ, ಕ್ಷಯಕರಾಂತಕ ಬುದ್ಧಿನಾಶಿನ್,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೭

ವಿಶ್ವೇಶ, ಭೋಃ ವರದವಿಠ್ಠಲ, ವಿಶ್ವರಕ್ಷಿನ್,
ಲಕ್ಷ್ಮೀಪತೇ, ಕಲಿಯುಗೇಶ, ಕುರೋಗನಾಶಿನ್
ವಾತ್ಸಲ್ಯ ಚಿತ್ತದ, ದಯಾಕರ, ದೀನನಾಥ,
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೮

ಸ್ತೋತ್ರಂ ತ್ವಿದಂ ಪಠತಿ ಯಃ ಸತತಂ ತ್ರಿಕಾಲೇ
ಸಃ ನಿಶ್ಚಿತಂ ತ್ಯಜತಿ ನೀಚಮತಿಂ ಕುಕಾರ್ಯಮ್
ಶ್ರದ್ಧಾಂ ಯಶಶ್ಚ ಲಕ್ಷತೇ; ಸಮತಿಂ ದದಾತಿ
ಶ್ರೀವಿಠ್ಠಲ, ಪ್ರಣವ, ದೇಹಿ ಕರಾವಲಂಬಮ್ ೯

ಶ್ರುತ್ವಾಪಿ ಚಿಂತನಮತಿಂ ಸುಗತಿಂ ದದಾತಿ
ಆರೋಗ್ಯ ಭಾಗ್ಯ ಸುವರಂ ಲಭತೇ ಚ ವಿದ್ಯಾಮ್
ಪ್ರಜ್ಞಾಂ ದದಾತಿ ಕುಮತಿಂ ಹರತೀಹ ನಿತ್ಯಂ
ಪ್ರೀತ್ಯಾ ಹಿ ಪಶ್ಯತಿ ಸದಾ ವರದಾತೃಬಂಧುಃ ೧೦

ಇತಿ ಶ್ರೀ ವರದವಿಠ್ಠಲ
ನಾಮಾವಲ್ಯಷ್ಟಕಂ ಸಂಪೂರ್ಣಮ್

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು .ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ಶಾಂಡಿಲ್ಯರ ಭಕ್ತಿಸೂತ್ರಗಳು

---ಕಂದಾಡೈ ಕೇಶವನ್.

ಭಕ್ತಿ ಬಾವನೆ ಬಹು ಪ್ರಾಚೀನ. ಭಗವಂತನ ಸೃಷ್ಟಿಯಲ್ಲಿ ಮಾನವನ ಜನ್ಮಜಿಜ್ಞಾಸೆ ಅವನ ಆಜನ್ಮ ಹಕ್ಕು. ಆಧುನಿಕ ಯುಗದಲ್ಲಿ ಮಾನವನು ಸಂಕ್ಷೋಭೆ ಸಂಕಷ್ಟಗಳಿಂದ ನರಳುತ್ತಿರುವಾಗ ವೇದ ಇತಿಹಾಸ ಪುರಾಣಗಳು ಭಗವದ್ಭಕ್ತಿಯಿಂದ, ಭಗವದನುಗ್ರಹದಿಂದ ಮಾನವನು ಈ ಸಂಕಷ್ಟ ಸಂಕ್ಷೋಭೆಗಳಿಂದ ಮುಕ್ತನಾಗಿ ಮೋಕ್ಷವನ್ನು ಹೊಂದಬಹುದೆಂದು ಸಾರುತ್ತವೆ. ಭಕ್ತಿಯ ಮೂಲವನ್ನು ನಾವು ಋಗ್ವೇದ ಸಂಹಿತೆಯಲ್ಲಿ ಕಾಣಬಹುದು. ಉದಾಹರಣೆಗೆ --

ಯಾರು ಜಗತ್ಕಾರಕನೂ ಜಗತ್ ಪಿತೃವೂ ನಿತ್ಯನೂತನನೂ ಶ್ರೀ ಪತಿಯೂ ಆದ ವಿಷ್ಣುವಿಗೆ ತನ್ನನ್ನು ಸಮರ್ಪಿಸಿಕೊಳ್ಳುತ್ತಾನೆಯೋ ಪರಮಾತ್ಮನ ಜನ್ಮ ಕರ್ಮಾದಿಗಳನ್ನು ಸ್ತುತಿಸುತ್ತಾನೆಯೋ (ಭಕ್ತಿ) ಅವನು ಆ ಚಿತ್ಸ್ವರೂಪವಾದ ಮಹಾ ವಿಷ್ಣುವನ್ನು ಹೊಂದುತ್ತಾನೆ (೧.೧೫೬.೩) ಮತ್ತೆ ಕಠೋಪನಿಷತ್ತು ಹಾಗೂ ಮುಂಡಕೋಪನಿಷತ್ತುಗಳಲ್ಲಿ ಬರುವ ಈ ಮಹಾಮಂತ್ರ ಭಕ್ತಿಯ ಸೋಪಾನಕ್ಕೆ ಅಡಿಗಲ್ಲು. ಪರಮಾತ್ಮಜೀವಾತ್ಮನ ನಡುವ ಸಂಬಂಧದಲ್ಲಿ ದೇವರಲ್ಲಿನ ಭಕ್ತಿ ಅತ್ಯವಶ್ಯಕ. ಕ್ರಮಬದ್ಧವಾದ ಭಕ್ತಿ ಪ್ರಪತ್ತಿಗಳ ಭಕ್ತಿ ಅಭ್ಯಾಸದಿಂದ ಚೇತನನು ಸಂಪೂರ್ಣವಾಗಿ ಮುಕ್ತಿಯನ್ನು ಹೊಂದುತ್ತಾನೆ ಎಂಬ ಭಾವ ಒಡಮೂಡುತ್ತದೆ.

ನಾಯಮಾತ್ಮಾಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ
ಆತ್ಮಾವಿವೃಣುತೇ ತನೂಂ ಸ್ವಾಮ್

ಈ ಆತ್ಮನು ಪ್ರವಚನದಿಂದ ಲಭ್ಯನಲ್ಲ. ಮೇಧಾಶಕ್ತಿಯಿಂದ, ಶ್ರವಣದಿಂದ ದೊರಕಲಾರ. ಈ ಆತ್ಮನು ಯಾರನ್ನು ಆಯ್ಕೆಗೊಳ್ಳುವನೋ ಅವನಿಂದಲೇ ಪರಮಾತ್ಮನು ಲಭ್ಯನು ಅಂತಹ ಉಪಾಸಕನಿಗೆ ಪರಮಾತ್ಮನು ತನ್ನ ಸ್ವರೂಪವನ್ನು ತೋರುತ್ತಾನೆ.

ಪ್ರಾಚೀನ ಕಾಲದಿಂದಲೂ ಕೇವಲ ಭಕ್ತಿಯ ಮೂಲಕ, ಪರಮಾತ್ಮನ ಅನುಗ್ರಹ ಕೃಪಾಕಟಾಕ್ಷಗಳಿಂದ ಮಾತ್ರ ಚೇತನನಿಗೆ ಮುಕ್ತಿ ಎಂಬುವ ಭಾವನೆ ಬೆಳೆದಾಗ, ಭಕ್ತಿಯ ನಿರ್ವಚನವನ್ನು ಅವರ ಮಹಿಮೆಯನ್ನು ಅನೇಕ ಗ್ರಂಥಗಳು ಎತ್ತಿ ಹಿಡಿದವು. ಭಕ್ತಿ ಹೆಚ್ಚಿದಂತೆಲ್ಲಾ ಭಕ್ತನು ಪ್ರಗತಿ ಹೊಂದಿ ಈಶ್ವರನಲ್ಲಿ ಮಹಾ ವಿಶ್ವಾಸವನ್ನು ಹೊಂದಿದಾಗ ಜೀವನದ ಹಲವು ಕಷ್ಟ ನಷ್ಟಗಳು ಹಗುರವಾಗಿ ಆಧ್ಯಾತ್ಮಿಕ ಶಾಂತಿಯ ಕಡೆ ಮುನ್ನುಗ್ಗುತ್ತಾನೆ. ಭಕ್ತಿಯ ಅದ್ಭುತವಾದ ಈ ಶಕ್ತಿ ನಿಜವಾಗಲೂ ಪವಾಡ ಸದೃಶ. ಜೀವನ ಕಲ್ಯಾಣಹೇತು. ಜಪತಪ ಪ್ರಾರ್ಥನೆಗಳು ನಿರಾಶೆ, ದುಃಖ ದುರ್ಮಾರ್ಗಗಳನ್ನು ನಿವಾರಿಸಿ ಮಾನಸಿಕ ಶಾಂತಿಸಂತೋಷಗಳನ್ನು ನೀಡಬಲ್ಲವು. ಇಂತಹ ಭಕ್ತಿಯ ಮಹಿಮೆಯನ್ನು ಸಾರುವ ಸೂತ್ರ ಗ್ರಂಥಗಳು ಅನೇಕ ಮಹರ್ಷಿಗಳು ಲೋಕಕಲ್ಯಾಣಕ್ಕಾಗಿ ರಚಿಸಿದರು. ಅಂತಹ ಸೂಕ್ಷ್ಮ ಗ್ರಂಥಗಳಲ್ಲಿ ನಾರದರ ಭಕ್ತಿ ಸೂತ್ರ. ಶಾಂಡಿಲ್ಯರ ಭಕ್ತಿಸೂತ್ರಗಳು ಬಹು ಪ್ರಸಿದ್ಧವಾದವು.

## ಶಾಂಡಿಲ್ಯರ ಜೀವನ

ಹಿಂದೆ ಶಂಡಿಲನೆಂಬ ಋಷಿ ಚಿರಕಾಲ ಈಶ್ವರನನ್ನು ಕುರಿತು ತಪಸ್ಸುಮಾಡಲು ಶಾಂಡಿಲ್ಯನು ಜನಿಸಿದನು. ಈತನು ಚಿಕ್ಕವನಾಗಿದ್ದಾಗ ಮಳೆಗಾಲದ ಎರೆಮಣ್ಣುತಂದು ಒಡನಾಡಿಗಳ ಸಂಗಡ ಗೋಪುರಯುಕ್ತವಾದ ಆಲಯವನ್ನು ನಿರ್ಮಿಸಿ, ಶಿವನನ್ನು ಅಲ್ಲಿ ಪ್ರತಿಷ್ಠೆ ಮಾಡಿ ಉಮ್ಮತ್ತಿ ದತ್ತೂರ ಮುಂತಾದ ಕಾಡು ಹೂವುಗಳಿಂದ ಪೂಜಿಸಿ ನಲಿದು ಆನಂದಪಡುತ್ತಿದ್ದನು. ಯುಕ್ತಕಾಲವಲ್ಲಿ ಶಾಂಡಿಲ್ಯನು ಉಪನಯನ ಸಂಸ್ಕಾರ ಪಡೆದು ಗುರುಶುಶ್ರೂಷೆಯಲ್ಲಿ ಬ್ರಹ್ಮಚರ್ಯವ್ರತನಿಷ್ಠನಾಗಿ ಶುನಕ ಮಹರ್ಷಿಗಳ ಮಗನಾದ ಅತಿಧನ್ವ ಮಹರ್ಷಿಯಲ್ಲಿ ಬ್ರಹ್ಮವಿದ್ಯೆಯನ್ನು ಕಲಿತ. ಅತಿಧನ್ವರು ಉಪದೇಶಿಸಿದ ಬ್ರಹ್ಮವಿದ್ಯೆ ಉದ್ಗೀತ ಎಂಬುವುದಾಗಿ ಪ್ರಸಿದ್ಧಿಯನ್ನು ಹೊಂದಿದೆ.

ಬ್ರಹ್ಮೋತ್ತರ ಖಂಡವಲ್ಲಿ ಶಾಂಡಿಲ್ಯರ ಹಾಗೂ ವಿದರ್ಭದೇಶದ ಸತ್ಯರಥ ರಾಜರ ವೃತ್ತಾಂತವಿದೆ. ಶುಕ್ಲಕೃಷ್ಣತ್ರಯೋದಶೀ ತಿಥಿಗಳಲ್ಲಿ ಶ್ರದ್ಧಾಪೂರ್ವಕವಾಗಿ ಈಶ್ವರ ಪೂಜೆ ಮಾಡಿದರೆ ಪುತ್ರ ಪೌತ್ರಾಭಿವೃದ್ಧಿ ಇಷ್ಟಾರ್ಥಸಿದ್ಧಿ ಉಂಟಾಗುತ್ತೆ ಎಂಬುವುದಾಗಿ ಶಾಂಡಿಲ್ಯರ ಉಪದೇಶ.

## ಶಾಂಡಿಲ್ಯರ ಭಕ್ತಿ ಸೂತ್ರಗಳು

ಶಾಂಡಿಲ್ಯರ ಭಕ್ತಿ ಸೂತ್ರಗಳಿಗೆ ಸ್ವಪ್ನೇಶ್ವರರ ಹಾಗೂ ನಾರಾಯಣತೀರ್ಥರ ವ್ಯಾಖ್ಯಾನಗಳು ಲಭ್ಯವಾಗಿವೆ. ಶಾಂಡಿಲ್ಯರು ತಮ್ಮ ೧೦೦ ಸೂತ್ರಗಳಲ್ಲಿ ಭಕ್ತಿ ದರ್ಶನವನ್ನು ನಮಗೆ ನೀಡಿದ್ದಾರೆ. ದೇವರ್ಷಿ ನಾರದರು "ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ" ಎಂಬುವುದಾಗಿ ಪ್ರಾರಂಭಿಸಿದರೆ ಶಾಂಡಿಲ್ಯರು "ಅಥಾತೋ ಭಕ್ತಿ ಜಿಜ್ಞಾಸಾ" ಎಂಬುವುದಾಗಿ ಮೊದಲನೆ ಅಧ್ಯಾಯದಲ್ಲಿ ಭಕ್ತಿಯನ್ನು ತಿಳಿಯುವ ಆಸೆ ತೋರಿ "ಸಾ ಪರಾನುರಕ್ತಿ ರೀಶ್ವರೇ" ಅಂತಹ ಭಕ್ತಿ ಈಶ್ವರನಲ್ಲಿ ಅತ್ಯಂತ ಅನುರಕ್ತಿ ಎಂಬುವುದಾಗಿ ಹೇಳುತ್ತಾರೆ. ಭಕ್ತಿ ಎಂದರೆ ಪರಮಾತ್ಮನಲ್ಲಿ ಉಂಟಾಗುವ ಅನುರಕ್ತಿ -- ಅನುರಾಗ ಪರಮಾತ್ಮನ ಮಹಾತ್ಮಜ್ಞಾನ. ವಿಷ್ಣು ಪುರಾಣದಲ್ಲಿ ಪರಾಶರರು ತಿಳಿಸಿದ --

"ಯಾ ಪ್ರೀತಿರವಿವೇಕಾನಾಂ
ವಿಷಯೇಷ್ವನ ಪಾಯಿನೀ
ತ್ವಾಮನುಸ್ಮರತಸ್ಸಾ ಮೇ
ಹೃದಯಾನ್ಮಾಪ ಸರ್ಪತು"

(ಅವಿವೇಕಿಗಳಿಗೆ ವಿಷಯ ಸುಖದಲ್ಲಿ ಎಂತಹ ದೃಢವಾದ ಪ್ರೀತಿ ಇರುತ್ತೋ ಅಂತಹ ಪ್ರೀತಿಯು ನಿನ್ನಲ್ಲಿದ್ದು ನಿನ್ನನ್ನೇ ಸ್ಮರಿಸುತ್ತಿರುವ ನನ್ನ ಹೃದಯದಿಂದ ಆ ಪ್ರೀತಿ ಮಾಯವಾಗದಿರಲಿ)

ಎಂಬುವ ತತ್ವವನ್ನೇ ಬೋಧಿಸುತ್ತದೆ. ಭಾಗವತದಲ್ಲಿ ತಿಳಿಸುವ ಅಹೈತುಕ್ಯ ವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ --ಎಂಬುವ ಅಹೈತುಕ ಭಕ್ತಿಸ್ವರೂಪವೂ ಇದೇ. ಭಕ್ತಿ ಎಂಬುದು ಭಗವಂತನ ಕರುಣೆಗಾಗಿ ಅವನಲ್ಲಿ ಇಡುವ ಪ್ರೀತಿಯಿಂದ ಉಂಟಾಗುವ ಆನಂದಕ್ಕಾಗಿ ಹಾತೊರೆಯುವ ಪ್ರತಿ ಆತ್ಮದ ಆಂತರಿಕ ಗುಣ -- ಭಕ್ತಿಜ್ಞಾನ ಕರ್ಮಗಳು ಆತ್ಮಜ್ಞಾನವನ್ನು ಬಯಸುವ ಪ್ರತಿಯೊಬ್ಬನಿಗೂ ಬೇಕಾಗುವ ಸುಲಭ ಮಾರ್ಗಗಳು. ಆಧ್ಯಾತ್ಮಿಕ ಸಾಧನೆಗಳ ಫಲವಾಗಿ ಮನಸ್ಸು ಕರಗಿ ಭಗವಂತನಲ್ಲಿ ಉಂಟಾಗುವ ಪರಮ ಪ್ರೇಮ ರೂಪವೇ ಭಕ್ತಿ. ಮಹಾ ನಾರಾಯಣೀಯೋಪನಿಷತ್ತಿನಲ್ಲಿ ಸಾಲಂಬ ನಿರಾಲಂಬ ಯೋಗ ವಿಚಾರಣೆಗಳನ್ನು ವಿವರಿಸಿ--

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

***ಸಪ್ತಗಿರಿ***

ತಿ.ತಿ.ದೇ., ತಿರುಪತಿ.

ಕೊಂಡು ಓದಿರಿ. ಕೊಂಡು ಓದಿಸಿರಿ.

ತಸ್ಮಾತ್ ಸರ್ವೇಷಾ ಮಧಿ ಕಾರಿಣಾಂ
ಅನಧಿಕಾರಿಣಾಂ ಭಕ್ತಿಯೋಗ ಏವ ಪ್ರಶಸ್ಯತೇ

ಎಂಬುವುದಾಗಿ ಭಕ್ತಿಯೇ ಉತ್ತಮವಾದದ್ದು. ಅದು ನಿರುಪದ್ರವ, ಕರ್ಮ, ಜ್ಞಾನ ಯೋಗಗಳು ಕಷ್ಟತರವಾದುವು. ಸಾಮಾನ್ಯ ಜನರಿಗೆ ನಿಲುಕದಂತಹವು. ಭಕ್ತಿಯೋಗಕ್ಕೆ ಎಲ್ಲರಿಗೂ ಹಕ್ಕಿದೆ. ಮತ ಲಿಂಗ ಭೇದಗಳು ಇವಕ್ಕಿಲ್ಲ. ಭಕ್ತಿಯಿಂದ ಮುಕ್ತಿ ಸುಲಭ. ಕಾರಣ ಭಕ್ತ ವತ್ಸಲನಾದ ಭಗವಂತ ತಾನಾಗಿ ಸರ್ವಜನರನ್ನೂ ಮೋಕ್ಷಕ್ಕೆ ಕೊಂಡೊಯ್ಯುತ್ತಾನೆ.

ಭಕ್ತ ವತ್ಸಲ ಸ್ವಯಮೇವ
ಸರ್ವೇಭ್ಯೋ ಮೋಕ್ಷ ವಿಘ್ನೇ ಭ್ಯೋ
ಭಕ್ತಿ ನಿಷ್ಠಾನ್ ಸರ್ವಾನ್ ಪರಿಪಾಲಯತಿ

ಶಾಂಡಿಲ್ಯರು ತಮ್ಮ ಭಕ್ತಿ ಸೂತ್ರದಲ್ಲಿ ಭಕ್ತಿಯು ಕ್ರಿಯೆಯಲ್ಲ ಎನ್ನುವರು. ಕಾರಣ ಜ್ಞಾನದಂತೆ ಭಕ್ತಿಯು ಕೃತಿಯನ್ನು ಅಪೇಕ್ಷಿಸಲಾರದು. ಕರ್ಮ ಒಂದರಿಂದಲೇ ಮುಕ್ತಿಯನ್ನು ಪಡೆಯಲಾರರು ಎಂಬುವುದು ಆಚಾರ್ಯರ ಸಿದ್ಧಾಂತ. ಭಕ್ತಿಯು ಭಗವಂತನ ಅನುಗ್ರಹದಿಂದ ಮಾತ್ರ ಉಂಟಾಗುತ್ತದೆ. ಶಾಂಡಿಲ್ಯರು ಮತ್ತೆ "ಅತ ಯೇವ ಫಲಾನಂತಮ್" ಭಕ್ತಿಯ ಫಲವು ಅನಂತ ಎಂಬುವುದಾಗಿ ವಿವರಿಸುವಾಗ ಭಾಗವತದ "ಸರ್ವಂ ಮದ್ಭಕ್ತಿಯೋಗೇನ ಮದ್ಭಕ್ತೋ ಲಭತೇಽಜಸಾ" ಎಂಬುವುದನ್ನು ನಮಗೆ ಸ್ಮರಣೆಗೆ ತರುತ್ತದೆ. ಒಂಬತ್ತನೆಯ ಸೂತ್ರದಲ್ಲಿ ತದ್ವತಃ ಪ್ರಪತ್ತಿ ಶಬ್ದಾಚ್ಚ ನ ಜ್ಞಾನಂ ಇತರ ಪ್ರಪತ್ತಿವತ್ ಎಂಬುವುದಾಗಿ ಶಾಂಡಿಲ್ಯರು ಪ್ರಪತ್ತಿ (ಭಕ್ತಿಯು) ಜ್ಞಾನವಲ್ಲ ಜ್ಞಾನಪೂರಕವಾದ ಭಕ್ತಿಯು ಪ್ರಪತ್ತಿಯೆಂಬುದು ಎಂಬುವುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಭಗವದ್ಗೀತೆಯಲ್ಲಿ ಸ್ವಾಮಿ ಹೇಳುವ 'ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ವಾಸುದೇವ ಸರ್ವಮಿತಿ ಸಮಹಾತ್ಮ ಸುದುರ್ಲಭಃ' -- ಜ್ಞಾನವಂತನು ನನ್ನಲ್ಲಿ ಭಕ್ತಿ ಮಾಡುವನು ಎಂಬುವುದಾಗಿ ಹೇಳುವಾಗ ಇದೇ ಸೂತ್ರದ ಅರ್ಥ ಬರುತ್ತದೆ. ಅಂದರೆ ಭಕ್ತಿಯಿಂದ ಜ್ಞಾನವೃದ್ಧಿ. ಜ್ಞಾನದಿಂದ ಭಕ್ತಿವೃದ್ಧಿ ಎಂಬುವ ಅನ್ಯೋನ್ಯಮತ ಶ್ರೀಮದ್ರಾಮಾನುಜರ ಸಿದ್ಧಾಂತಕ್ಕೆ ಹತ್ತಿರವಾಗಿದೆ. ಜ್ಞಾನದಿಂದ ಕೂಡಿದ ಭಕ್ತಿಯೇ ಶ್ರೇಷ್ಠ ಎಂಬುವುದು ಶ್ರೀರಾಮಾನುಜರ ವಾಕ್ಕು. ಭಕ್ತಿಯ ಅನೇಕ ಲಕ್ಷಣಗಳನ್ನು ಶಾಂಡಿಲ್ಯರು ವಿವರಿಸುವಾಗ "ಸಮ್ಮಾನ -- ಬಹುಮಾನ. ಪ್ರೀತಿ -- ವಿರಹ ಇತರವಿಚಿಕಿತ್ಸಾ-- ಮಹಿಮಖ್ಯಾತಿ -- ತದರ್ಥ ಪ್ರಾಣಸ್ಥಾನ -- ತದೀಯತಾ -- ಸರ್ವ

ತದ್ಭಾವ -- ಅಪ್ರತಿಕೂಲ್ಯಾದೀನಿ ಚ ಸ್ಮರಣೇಭ್ಯೋ ಬಾಹುಲ್ಯಾತ್" (ಸೂತ್ರ ೪೪) ಎಂಬುವುದಾಗಿ ಹೇಳಿದ್ದಾರೆ. ಸಮ್ಮಾನ ವೆಂದರೆ ಗೌರವ -- ಬಹುಮಾನ ಅತ್ಯಂತ ಗೌರವ -- ಪ್ರೀತಿಯೆಂದರೆ ಪ್ರೇಮ. ವಿರಹ ಅಗಲುವಿಕೆಯಿಂದ ಉಂಟಾಗುವ ಅನುರಾಗ ಅನುಕಂಪ. ದುಃಖ -- ಇತರ ವಿಚಿಕಿತ್ಸೆ ಪರಮಾತ್ಮನನ್ನು ಬಿಟ್ಟು ಮಿಕ್ಕ ವಸ್ತುಗಳಲ್ಲಿ ನಿರಾಸಕ್ತಿ -- ಮಹಿಮಾಖ್ಯಾನಿ ಪರಮಾತ್ಮನ ಮಹಿಮೆಯನ್ನು ಸ್ತೋತ್ರ ಸಂಗೀತ ನೃತ್ಯಗಳಿಂದ ಬಣ್ಣಿಸುವುದು. ತದರ್ಥಪ್ರಾಣಸ್ಥಾನ. ಅವನಿಗಾಗಿ ತಾನು ಜೀವಿಸುವುದು. ನಾನಿರುವುದು ನಿನಗಾಗಿ ಎಂಬುವ ಭಾವ -- ಸರ್ವತದ್ಭಾವ -- ಎಲ್ಲರ ಅಂತರ್ಯಾಮಿಯಾಗಿ ಪರಮಾತ್ಮನಿರುವ ಎಂಬುವ ದೃಢವಿಶ್ವಾಸ. ಅಪ್ರಾತಿಕೂಲ್ಯವೆಂದರೆ ಅವನ ಸಂಕಲ್ಪಕ್ಕೆ ಬದ್ಧನಾಗುವುದು.

ಎರಡನೆಯ ಅಧ್ಯಾಯದಲ್ಲಿ --

ಬುದ್ಧಿ ಹೇತು ಪ್ರವೃತ್ತಿಃ
ಅವಿಶುದ್ಧೇರವಘಾತವತ್
ತದಂಗಾನಾಂ ಚ ತಾಮ್ಯೈ
ಶ್ವರ್ಯಪರಾಂ ಕಾಶ್ಯಪಃ ಪರತ್ವಾತ್
ಉಭಯ ಪರಾಂ ಶಾಂಡಿಲ್ಯಃ
ಶಬ್ದೋಪಪತ್ತಿಭ್ಯಾಮ್

ಎಂಬುವುದಾಗಿ ಭಕ್ತಿಯು ಶುದ್ಧವಾಗುವರೆಗೆ ಜ್ಞಾನಕ್ಕಾಗಿ ಚೇತನನು ಪ್ರಯತ್ನಿಸುತ್ತಿರಬೇಕು. ಉದಾಹರಣೆಗೆ ಬತ್ತವನ್ನು ಅಕ್ಕಿಯು ಸಿಗುವವರೆಗೆ ಕುಟ್ಟುವಂತೆ. ಶ್ರವಣ ಮನನ ಧ್ಯಾನ ಉಪಾಸನಾದಿಗಳನ್ನು ಭಕ್ತಿಯು ಪರಿಪಕ್ವವಾಗುವವರೆಗೂ ಪುನಃ ಪುನಃ ಮಾಡಬೇಕು. ಶಮ ದಮಾದಿಗಳನ್ನು ಸತತವಾಗಿ ಅಭ್ಯಾಸ ಮಾಡಬೇಕು. ನಾರದರ ಭಕ್ತಿಸೂತ್ರದಲ್ಲೂ ಕೂಡ "ಅವ್ಯಾವೃತ್ತ ಭಜನಾತ್" ಎಂಬುವ ಸೂತ್ರದಲ್ಲಿ ಭಗವದ್ಭಕ್ತಿಯನ್ನು ಪಡೆಯುವವರೆಗೂ ಎಡಬಿಡದೆ ಭಜನೆ, ಸೇವೆ, ಪೂಜೆ ನಿರಂತರವಾಗಿ ಮಾಡಬೇಕೆಂದು ಬೋಧಿಸಿದ್ದಾರೆ. ಇದನ್ನೇ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು--

"ಅನನ್ಯ ಚೇತಾಃ ಸತತಂ
ಯೋ ಮಾಂ ಸ್ಮರತಿ ನಿತ್ಯಶಃ
ತಸ್ಯಾಹಂ ಸುಲಭಃ ಪಾರ್ಥ
ನಿತ್ಯ ಯುಕ್ತಸ್ಯ ಯೋಗಿನಃ

(ಎಲೈ ಅರ್ಜುನ ಅನನ್ಯವಾದ ಮನಸ್ಸಿನಿಂದ ಯಾರು ಸದಾ ಸತತವಾಗಿ ನನ್ನನ್ನು ಸ್ಮರಿಸುವನೋ ಅಂತಹ ನಿತ್ಯಯುಕ್ತನಾದ ಯೋಗಿಗೆ ನಾನು ಸುಲಭವಾಗಿ ದೊರೆಯುತ್ತೇನೆ) ಎಂಬುವುದಾಗಿ ಹೇಳಿರುವುದೂ ಇದೇ ಮತವನ್ನು. ಕಾಶ್ಯಪರು "ಬುದ್ಧಿಯು ಪರಮೇಶ್ವರನ ಅನಂತಗುಣಗಳ ಐಶ್ವರ್ಯವನ್ನು ಕೊಂಡಾಡಬೇಕೆಂದರೆ ಬಾದರಾಯಣ ಪ್ರಕಾರ ಅಂತರ್ಯಾಮಿಯಾದ ಸ್ವಾಮಿಯನ್ನು ಉಪಾಸನೆ ಮಾಡುವುದು. ಶಾಂಡಿಲ್ಯರ ಪ್ರಕಾರ ಸಾಧಕನು ಪರಮಾತ್ಮನ ಮಹಿಮೆ ಗರಿಮೆಯ ಚಿಂತನ ಹಾಗೂ ಆತ್ಮನ ಚಿಂತನಗಳನ್ನು ಮಾಡಬೇಕು. ಇದನ್ನೇ ಭಗವದ್ ರಾಮಾನುಜರು ತಮ್ಮ ಶರಣಾಗತಿ ಗದ್ಯದಲ್ಲಿ--

ತೇಷಾಂ ಜ್ಞಾನೀ ನಿತ್ಯಯುಕ್ತಃ
ಏಕ ಭಕ್ತಿಃ ವಿಶಿಷ್ಯತೇ
ಪ್ರಿಯೋ ಹಿ ಜ್ಞಾನಿನಃ ಅತ್ಯರ್ಥಂ
ಅಹಂ ಸ ಚ ಮಮ ಪ್ರಿಯಃ
ಉದಾರಾಃ ಸರ್ವ ಏವ ಏತೇ
ಜ್ಞಾನೀತು ಆತ್ಮೈವ ಮೇ ಮತಂ
ಅಸ್ಥಿತಃ ಸಹಿ ಯುಕ್ತಾತ್ಮಾ
ಮಾಮೇವ ಅನುತ್ತಮಾಂ ಗತಿಂ
ಬಹೂನಾಂ ಜನ್ಮನಾಮ್ ಅಂತೇ
ಜ್ಞಾನವಾನ್ ಮಾಂ ಪ್ರಪದ್ಯತೇ
ವಾಸು ದೇವಃ ಸರ್ವಮ್
ಇತಿ ಸ ಮಹಾತ್ಮಾ ಸುದುರ್ಲಭಃ
ಇತಿ ಶ್ಲೋಕತ್ರಯೋದಿತ
ಜ್ಞಾನಿನಂ ಮಾಂ ಕುರುಷ್ವ

(ಈ ಮೂರು ಶ್ಲೋಕಗಳಲ್ಲಿ ಭಗವದ್ಗೀತೆಯಲ್ಲಿ ಕೃಷ್ಣನು ಹೇಳಲ್ಪಟ್ಟಿರುವ ಜ್ಞಾನಿಯಾಗುವಂತೆ ಮಾಡು. ಮುಂದಿನ ಗದ್ಯ ಭಾಗದಲ್ಲಿ "ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತು ಅನನ್ಯಯಾ" ಭಕ್ತ್ಯಾತ್ವನನ್ಯಯಾ ಶಕ್ಯಃ -- ಮದ್ಭಕ್ತಿಂ ಲಭತೇ ಪರಾಮ್" ಇತಿ ಸ್ಥಾನತ್ರಯೋದಿತ ಪರಭಕ್ತಿ ಯುಕ್ತಂ ಮಾಂ ಕುರುಷ್ವ --ಹೀಗೆ ಮೂರು ಕಡೆಗಳಲ್ಲಿ ತಿಳಿಸಿರುವ ಪರಭಕ್ತಿಯಿಂದ ಕೂಡಿದವನನ್ನಾಗಿ ನನ್ನನ್ನು ಮಾಡು ಎಂಬುವುದಾಗಿ ಪ್ರಾರ್ಥಿಸುತ್ತಾರೆ. ಕಾಲಕ್ಕೆ ತಕ್ಕಂತೆ ಸದಾ ಬಿಡದೆ ಕೀರ್ತನೆ ನಮಸ್ಕಾರ ಮೊದಲಾದವುಗಳು ಮಾಡುವುದು. ಇಂತಹ ಗೌಣ ಭಕ್ತಿಯ ವಿವರಣೆಗಳನ್ನು ಶಾಂಡಿಲ್ಯರು ಹೇಳುತ್ತಾ ಈಶ್ವರ ತುಷ್ಟೇಃ ಏಕೋಽಪಿ ಬಲೀ ಅಬಂಧೋಽಪರ್ಣಾಸ್ಯ ಮುಖುಮ್ -- ಧ್ಯಾನ ನಿಯಮಸ್ತು ದೃಷ್ಟಸೌಕರ್ಯಾತ್ -- ತದ್ಯಜಿಃ ಪೂಜಾಯಾಮ್, ಇತರೇಷಾಂ ನೈವಮ್ ಪಾದೋದಕಂತು ಪಾದ್ಯಮವ್ಯಾಪ್ತೇಃ --ಎಂಬುವುದಾಗಿ ಹೇಳುವಾಗ ನವವಿಧ ಭಕ್ತಿಗಳ ಪ್ರಕಾರವನ್ನು ವಿವರಿಸುತ್ತಾರೆ. ಭಾಗವತದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯಭಾವ, ಸಖ್ಯಭಾವ ಮತ್ತು ಆತ್ಮ ಸಮರ್ಪಣ ಈ ನವವಿಧ ಭಕ್ತಿಗಳಲ್ಲಿ ಈಶ್ವರನನ್ನು ತೃಪ್ತಿಪಡಿಸಲು ಯಾವುದಾದರೂ ಒಂದು ಸಾಕು. ನಿಜವಾಗಿ ತಿಳಿಯಬೇಕಾದರೆ ಶುಭಾಶುಭ ಕರ್ಮಗಳ ಫಲವನ್ನು ಭಗವಂತನಿಗೆ ಅರ್ಪಿಸಿದಾಗ ಅವು ತಮ್ಮ ಫಲವನ್ನು ಕೊಡದೆ ಇರುವುದೇ ಪರಾಭಕ್ತಿಗೆ ಸೂಚನೆ. ಕೃತಯುಗದಲ್ಲಿ ಧ್ಯಾನ ಮಾತ್ರದಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರದಲ್ಲಿ ಪೂಜೆಯಿಂದ, ಕಲಿಯುಗದಲ್ಲಿ ಕೇಶವನ ಸ್ಮರಣೆಯಿಂದ ಭಗವಂತನನ್ನು ಪಡೆಯಬಹುದೆಂದು ಹೇಳಿರುವ ಪುರಾಣ ಉಕ್ತಿ ಇದಕ್ಕೆ ಉದಾಹರಣೆ. ಧ್ಯಾನ, ಪೂಜೆ, ಭಗವಂತನ ಪಾದೋದಕ ಯಾವುದಾದರೂ ಒಂದು ಮಾತ್ರದಿಂದಲೇ ಪರಮಾತ್ಮನ ಪ್ರೀತಿ ಲಭ್ಯವಾಗುತ್ತದೆ ಎಂಬುವುದು ಶಾಂಡಿಲ್ಯರ ಅಭಿಮತ. ೧೦ ನೇ ಸೂತ್ರದಲ್ಲಿ "ಪತ್ರಾದೇರ್ದಾನಮ್ ಅನ್ಯಥಾ ಹಿ ವೈಶಿಷ್ಟ್ಯಮ್" ಎಂಬುವುದಾಗಿ ಹೇಳಿರುವ ವಿಶೇಷತೆಯನ್ನು ನಾವು ಭಗವದ್ಗೀತೆಯ ೯ನೇ ಅಧ್ಯಾಯದ ೨೬ನೇ ಶ್ಲೋಕದ ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ತದಹಂ ಭಕ್ತ್ಯು ಪಹೃತ ಮಶ್ನಾಮಿ ಪ್ರಯತಾತ್ಮನಃ --ಪತ್ರ ಪುಷ್ಪ ಫಲ ಜಲವನ್ನಾಗಲೀ ಭಕ್ತಿಯಿಂದ ಯಾವನು ಅರ್ಪಿಸುವನೋ ಅಂತಹ ಭಕ್ತಿಯಿಂದ ಸಮರ್ಪಿಸಿದುದನ್ನು ಆ ಶುದ್ಧ ಚಿತ್ತ ಭಕ್ತಿಗಾಗಿ ನಾನು ಅದನ್ನು ಆದರದಿಂದ ಸ್ವೀಕರಿಸುತ್ತೇನೆ ಎಂಬುವ ತತ್ವದಲ್ಲಿ ಏನು ಸಮರ್ಪಿಸಿದ ಎಂಬುವುದು ಮುಖ್ಯವಲ್ಲ. ಹೇಗೆ ಸಮರ್ಪಿಸಿದ ಎಂಬುವುದು ಮುಖ್ಯ. ಕ್ರಿಯೆಗಿಂತ ಕ್ರಿಯಾಗುಣ ವಿಶೇಷಣ. ಅನನ್ಯ ಚಿತ್ತ ಶ್ರದ್ಧೆಯ ಭಕ್ತಿ ಮುಖ್ಯ. ಶ್ರೀಕೃಷ್ಣನಿಗೆ ಕುಚೇಲ ಒಂದು ಹಿಡಿ ಅವಲಕ್ಕಿ ಅರ್ಪಿಸಿದ. ಎಷ್ಟು ಕೊಟ್ಟನು ಎನ್ನುವುದು ಮುಖ್ಯವಲ್ಲ. ಕುಬೇರನ ಪರಮ ಭಕ್ತಿ. ವಿದುರನ ಹೆಂಡತಿ ಭಕ್ತಿ ಪರವಶಳಾಗಿ ಕೃಷ್ಣನಿಗೆ ಬಾಳೆಯ ಹಣ್ಣನ್ನು ಬಿಡಿಸಿ ಹಣ್ಣು ಬಿಸುಟು ಸಿಪ್ಪೆ ಬಾಯಿಗೆ ನೀಡಿದ್ದು. ಶಬರಿ ಶ್ರೀರಾಮಚಂದ್ರನಿಗೆ ಎಂಜಲು ಹಣ್ಣನ್ನು ನೀಡಿದ್ದು. ಶಿವಲಿಂಗಕ್ಕೆ ಬೇಡರಕಣ್ಣಪ್ಪ ಮಾಂಸ ನೈವೇದ್ಯ ಮಾಡಿದ್ದು. ಇಲ್ಲಿ ಪ್ರೀತಿ ಪೂರ್ವಕವಾದ ಭಕ್ತಿಯೇ ಮುಖ್ಯ. ಅದಕ್ಕೋಸ್ಕರವೇ ನಾವು ಭಗವದಾರಾಧನೆಯಲ್ಲಿ --

"ಯಾ ಪ್ರೀತಿಃ ವಿದುರಾರ್ಪಿತೇ
ಮಧುರಿಪೋ ಕುಂತ್ಯರ್ಪಿತೇ
ಯಾದೃಶೀ ಮಾ ಗೋವರ್ಧನ
ಮೂರ್ಧ್ನಿ ಯಾಚ
ಪೃಥ್ವು ಕೇ ಸ್ತನ್ಯೇ ಯಶೋದಾರ್ಪಿತೇ
ಭಾರದ್ವಾಜ ಸಮರ್ಪಿತೇ ಶಭರಿಕಾ
ದತ್ತೇ ಕುಚೇಲಾರ್ಪಿತೇ

ಯಾ ಪ್ರೀತಿರ್ಮುನಿ ಪತ್ನಿ
ಭಕ್ತ್ಯು ಪಹೃತೇ ಹ್ಯತ್ರಾಪಿ
ತಾಂ ತಾಂ ಕುರು
ಕಂದ ಮೂಲ ಫಲೋದಗ್ರಂ
ಕ್ರಮುಕಾಪ್ಪದಳೈಃ ಸಹ
ವಿಮಲಾನಿ ಚ
ತಾಂಬೂಲಿದಳಾನಿ ಸ್ವೀಕುರು ಪ್ರಭೋ

ಎಂಬುವುದಾಗಿ ಪ್ರಾರ್ಥಿಸಿ ದೇವರಿಗೆ ನೈವೇದ್ಯ ಮಾಡುವ ಪದ್ಧತಿ ಇಂದಿಗೂ ಎಂದೆಂದಿಗೂ ಇದೆ: ಭಕ್ತಿ ಬಲವಾದಾಗ ಭಕ್ತ ಭಗವಂತನ ವಿಚಾರಗಳನ್ನು ಕೇಳುತ್ತಾನೆ (ಶ್ರವಣ). ಕೇಳಿದ ವಿಷಯಗಳನ್ನು ಮನನ ಮಾಡುತ್ತಾನೆ. ಭಗವಂತನನ್ನು ಕುರಿತು ಚಿಂತಿಸುತ್ತಾನೆ (ಧ್ಯಾನ) ಧ್ಯಾನವು ಹೆಚ್ಚಾದಂತೆಲ್ಲಾ ಭಗವಂತನ ಸಾಕ್ಷಾತ್ಕಾರವಾಗುತ್ತೆ. ಶಾಂಡಿಲ್ಯರು ಭಕ್ತ್ಯಾ ಭಜನೋಪ ಸಂಹಾರಾತ್ ಗೌಣ್ಯಾ ಪರಾಯೈ ತದ್ಧೇತುತ್ವಾತ್ ಎಂಬುವ ಸೂತ್ರದಲ್ಲಿ ಹೇಳುವ ವಿಷಯ. ಗೌಣೀ ಭಕ್ತಿಯ ಪರಾಭಕ್ತಿಗಾಗಿಯೇ ಇರುತ್ತದೆ. ಪ್ರಾಣಿಗಳ ಮೂಲವೂ ಅವ್ಯಯನೂ ಆದ ಭಗವಂತನನ್ನು ಅನನ್ಯ ಮನಸ್ಸಿನಿಂದ ಭಜಿಸಿದರೆ ಅದೇ ಪರಮಾತ್ಮನಲ್ಲಿ ಉಂಟಾಗುವ ವಿಶ್ವಾಸದ ಪರಾಕಾಷ್ಠೆ, ಸಮಸ್ತ ಕಲ್ಯಾಣ ಗುಣ ಪರಿಪೂರ್ಣನಾದ ಕರುಣಾಸಿಂಧುವಾದ ಪರಮಾತ್ಮನನ್ನು ಅನನ್ಯ ಮನಸ್ಸಿನಿಂದ ಭಜಿಸದೇಕೆಂದು ಗೀತೆಯಲ್ಲೂ ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯ ಯುಕ್ತಾ ಉಪಾಸತೇ --ಎಂಬುವುದಾಗಿ ಸ್ವಾಮಿ ಹೇಳಿದ್ದಾನೆ ಶಾಂಡಿಲ್ಯರು ಇನ್ನೂ ವಿಶದವಾಗಿ "ಸ್ಮೃತಿ ಕೀರ್ತ್ಯೋಃ ಕಥಾದೇಶ್ಚ ಆರ್ತೌ ಪ್ರಾಯಶ್ಚಿತ್ತ ಭಾವಾತ್" ಎಂಬುವ ಸೂತ್ರದಲ್ಲಿ ಅನೇಕ ಪಾಪಗಳನ್ನು ಮಾಡಿ ದುಃಖವನ್ನು ಅನುಭವಿಸುವವರು ಆರ್ತರು. ಅವರು ಸ್ಮರಣ ಕೀರ್ತನಾದಿಗಳಿಂದ ತಮ್ಮ ಪಾಪಗಳನ್ನು ಹೋಗಲಾಡಿಸುಕೊಳ್ಳುವರು ಎಂದು ಸ್ಮೃತಿಗಳಲ್ಲಿ ಹೇಳಿರುವುದರಿಂದ ಪ್ರಾಯಶ್ಚಿತ್ತ ರೂಪವಾದ ಇವುಗಳನ್ನು ಆರ್ತಭಕ್ತಿಯಲ್ಲಿ ಸೇರಿಸಬೇಕೆಂದು ಶಾಂಡಿಲ್ಯರ ಮತ. ಇದಕ್ಕೆ ಪ್ರಮಾಣ ವಿಷ್ಣು ಪುರಾಣ ಶ್ಲೋಕ ಉದಾಹರಣೆ--

"ಯನ್ನಾಮಕೀರ್ತನಂ ಭಕ್ತ್ಯಾ
ವಿಲಯನಮ ನುತ್ತಮಮ್
ಮೈತ್ರೇಯಾ ಶೇಷಪಾಪಾನಾಂ
ಧಾತೂನಾಮಿವ ಪಾವಕಃ

(ಎಲೈ ಮೈತ್ರೇಯ ಭಕ್ತಿಯಿಂದ ಮಾಡುವ ನಾಮ ಸಂಕೀರ್ತನೆಯು ಬೆಂಕಿಯು ಲೋಹಗಳನ್ನು ಸುಟ್ಟು ಪರಿಶುದ್ಧಗೊಳಿಸುವಂತೆ ಎಲ್ಲ ಪಾಪಗಳನ್ನು ಕರಗಿಸಿಬಿಡುವ ಅತ್ಯುತ್ತಮ ಸಾಧನವು. ವಿಷ್ಣುಪುರಾಣದ ಮತ್ತೊಂದು ವಾಕ್ಯದಲ್ಲೂ ಕೂಡ ಯಾನಿ ತೇಷಾಮಶೇಷಾಣಾಂ ಕೃಷ್ಣಾನು ಸ್ಮರಣಂ ಪರಮ್. ತಪಸ್ಸು ಕರ್ಮಗಳು ಈ ರೂಪದ ಯಾವ ಯಾವ ಪ್ರಾಯಶ್ಚಿತ್ತಗಳಿವೆಯೋ ಅವೆಲ್ಲವುಗಳಲ್ಲಿ ಕೃಷ್ಣಚಿಂತನೆಯೇ ಅತ್ಯುತ್ತಮ ವಾದದ್ದು. ಮಹಾ ಪಾತಕಿಗಳೂ ಕೂಡ ಆರ್ತಭಕ್ತಿಗೆ ಮಾತ್ರ ಅಧಿಕಾರಿಗಳು. ಶಾಂಡಿಲ್ಯರು ಕೊನೆಯಲ್ಲಿ ತಮ್ಮ ೯೭ ಸೂತ್ರದಲ್ಲಿ "ಆಯುಶ್ಚಿತಮ್ ಇತರೇಷಾಂ ತು ಹಾನೀ ಅನಾಸ್ವದತ್ವಾತ್" ಆಯಸ್ಸು ಇರುವವರೆಗೂ ಮುಕ್ತಿಯು ದೊರಕುವುದಿಲ್ಲ ಕಾರಣ ಪ್ರಾರಬ್ಧ ಕರ್ಮವು ಸವೆಯುವವರೆಗೆ ಆತ್ಮನಿಗೆ ಶರೀರ ಪಾತವಾಗುವವರಿಗೂ ಮುಕ್ತಿಯಿಲ್ಲ. ಸಂಚಿತ ಆಗಾಮಿ ಕರ್ಮಗಳಾದರೋ ಪರಾಭಕ್ತಿ ಉಂಟಾದ ತಕ್ಷಣ ಅವುಗಳಿಗೆ ಆಶ್ರಯವಾಗಿರುವ ಬುದ್ಧಿಯು ಪರಾಭಕ್ತಿಯ ಫಲವಾಗಿ ನಷ್ಟ ಹೊಂದುತ್ತವೆ. ಇದಕ್ಕೆ ಪ್ರಮಾಣಗಳು ಬ್ರಹ್ಮ ಸೂತ್ರದ "ತದಧಿಗಮೇ ಉತ್ತರ ಪೂರ್ವಾಘಯೋಃ ಅಶ್ಲೇಷ ವಿನಾಶೌ ತದ್ವಪದೇಶಾತ್" ಹಾಗೂ ಗೀತೆಯ --ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇರ್ಜುನ (ಜ್ಞಾನವೆಂಬ ಅಗ್ನಿಯು ಎಲ್ಲ ಕರ್ಮಗಳನ್ನೂ ಭಸ್ಮಮಾಡುತ್ತದೆ.) ಶಾಂಡಿಲ್ಯರ ಭಕ್ತಿ ಸೂತ್ರಗಳು. ನಾರದರ ಭಕ್ತಿ ಸೂತ್ರಗಳಂತೆ ಸರಳವಾಗಿಲ್ಲ. ಸ್ವಲ್ಪ ಕಠಿಣವೇ. ಭಕ್ತಿ ಸಿದ್ಧಾಂತ ಹೇಳುವಾಗ ಹಲವಾರು ಕಡೆ ಸಾಂಖ್ಯಯೋಗ ಮುಂತಾದುವುಗಳ ಪ್ರಸ್ತಾಪಗಳಿವೆ. ಹಿಂದಿಯಲ್ಲಿ ಗೋರಖ್ ಪುರದ ಗೀತಾ ಪ್ರೆಸ್ ನವರು ಪ್ರಕಟಿಸಿದ ಶಾಂಡಿಲ್ಯ ಭಕ್ತಿ ಸೂತ್ರ ಬಿಟ್ಟರೆ ಕನ್ನಡ ಹಾಗೂ ಇಂಗ್ಲೀಷ್‌ನಲ್ಲಿ ಶ್ರೀ ರಾಮಕೃಷ್ಣಾಶ್ರಮದ ಶ್ರೀ ಸ್ವಾಮಿ ಹರ್ಷಾನಂದರ ಶಾಂಡಿಲ್ಯ ಭಕ್ತಿ ಸೂತ್ರಗಳು ನಮಗೆ ಲಭ್ಯವಾಗಿವೆ. ಶಾಂಡಿಲ್ಯರ ಮೂಲ ಸೂತ್ರಗಳನ್ನು ಅನುಸರಿಸಿ ಬರೆದ ಸ್ವಪ್ನೇಶ್ವರರ ಹಾಗೂ ನಾರಾಯಣ ತೀರ್ಥರ ಭಾಷ್ಯಗಳ ಸಂಪೂರ್ಣ ಕನ್ನಡ ಅನುವಾದ ಸರಳವಾಗಿ ಬರೆಯುವ ಅವಶ್ಯಕತೆಯೂ ಉಂಟು. ಇದನ್ನು ವಿದ್ವಾಂಸರಿಂದ ನಾವು ಮುಂದೆ ನಿರೀಕ್ಷಿಸೋಣ. ಪರಾಭಕ್ತಿಯಿಂದ ಜೀವನ್ಮುಕ್ತಿ ಸಂಸಾರ ಬಂಧನಕ್ಕೆ ಭಕ್ತಿಯ ಅಭಾವವೇ ಕಾರಣ ಎಂಬುವುದಾಗಿ ಭಕ್ತಿಯ ಅವಶ್ಯಕತೆ. ಅದರ ಹಿರಿಮೆಯನ್ನು ಸಾರಿದ ಮಹರ್ಷಿ ಶಾಂಡಿಲ್ಯರಿಗೆ ನಮೋನಮಃ.



# ಷೋಡಶಾಕ್ಷರೀಮಂತ್ರ

---ವಿಶ್ವೇಶ್ವರ ವಿ.ಕೆ.

ನರಜನ್ಮ ಅತ್ಯಂತ ದುರ್ಲಭವಾದದ್ದು. ಅದನ್ನು ಪಡೆಯದೇಕಾದರೆ ಅಸಂಖ್ಯ ಜನ್ಮಗಳ ಸುಕೃತ ವಿಶೇಷದ ಅಗತ್ಯವಿದೆ. ವಿಶಿಷ್ಟವಾದ ಮತ್ತು ಅನನ್ಯವಾದ ಬುದ್ಧಿಶಕ್ತಿಗೆ ಒಡೆಯನಾದ ಮನುಷ್ಯ ಅದರ ಮೂಲಕವೇ ಜೀವಿಗಳಲ್ಲಿ ಅತಿಶ್ರೇಷ್ಠವಾದ ಸ್ಥಾನವನ್ನು ಅಲಂಕರಿಸಲು ಸಾಧ್ಯವಾಗಿದೆ. ಇಷ್ಟು ಶ್ರೇಷ್ಠವಾದ ಜೀವಿತದ ನಮಗೆ ಪ್ರಾಪ್ತವಾಗಿದೆ ಎಂದರೆ ಇದರ ಸಾರ್ಥಕತೆಗೂ ಮಹತ್ತರವಾದ ಒಂದು ಗುರಿಯಿರಲೇಬೇಕು ತಾನೇ? ಆ ಗುರಿಯನ್ನು ಸಾಧಿಸಿದರೆ ಮಾತ್ರ ಮಾನವ ಜೀವಿತ ಸಫಲವೆನಿಸುತ್ತದೆ.

ಅದಕ್ಕಾಗಿ, "ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರವೇ ಹೊನ್ನಿನ ಕಲಶವಯ್ಯ" ಎಂದಂದುಕೊಂಡು, ತನ್ನ ಮನೋಮಂದಿರದಲ್ಲೇ ವಾಸವಾಗಿರುವ ಪರಮಾತ್ಮನನ್ನು ಗುರುತಿಸಿಕೊಳ್ಳದೇಕಾದ್ದು ಅಗತ್ಯ. ಆಗ ಮಾತ್ರ ಹೃದಯದಲ್ಲಿ ಭಕ್ತಿಯ ಆವಿರ್ಭಾವವಾಗಲು ಸಾಧ್ಯ.

ಕಠೋಪನಿಷತ್ತಿನಲ್ಲಿ ಹೇಳಿರುವಂತೆ,

ಇಹ ಚೇದಶಕತ್ ಬೋದ್ಧುಂ<br>
ಪ್ರಾಕ್ ಶರೀರಸ್ಯ ವಿಸ್ರಸಃ<br>
ತತಃ ಸರ್ವೇಷು ಲೋಕೇಷು<br>
ಶರೀರತ್ವಾಯ ಕಲ್ಪತೇ

ಅತ್ಯಂತ ಬೆಲೆಬಾಳುವ ಈ ಮನುಷ್ಯ ಶರೀರ ವಿನಾಶವಾಗಿ ಹೋಗುವ ಮೊದಲೇ ಆತ ತನ್ನ ದೇಹದಲ್ಲಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡರೆ ಸರಿ -- ಜನ್ಮ ಸಾಫಲ್ಯ ಹೊಂದುತ್ತದೆ. ಅದಿಲ್ಲದೆ ಹೋದರೆ ಮತ್ತೆ ಅನೇಕ ಕಲ್ಪಗಳವರೆಗೆ ವಿಭಿನ್ನ ಲೋಕಗಳಲ್ಲಿ ಹಲವು ಜನ್ಮಗಳಲ್ಲಿ ನರಕಯಾತನೆಯನ್ನನುಭವಿಸುವುದಕ್ಕೆ ಸಿದ್ಧವಾಗಬೇಕಾಗುತ್ತದೆ.

ಆದ್ದರಿಂದ ಭಗವತ್ಪ್ರಾಪ್ತಿಯ ಪರಮಗುರಿಯನ್ನು ಈಡೇರಿಸಿಕೊಳ್ಳುವುದಕ್ಕೆ ಸೂಕ್ತವಾದ, ಸುಲಭವಾದ, ಸರಳವಾದ ಮಾರ್ಗಗಳ ಶೋಧನೆ ನಡೆದಿದೆ. ಅಂಥ ಒಂದು ಮಾರ್ಗವೆಂದರೆ ಭಗವನ್ನಾಮ ಜಪ. ಶ್ರೀಕೃಷ್ಣನಿಂದ ಯಜ್ಞಗಳಲ್ಲೇ ಶ್ರೇಷ್ಠ ಯಜ್ಞವೆಂಬುದಾಗಿ ("ಯಜ್ಞಾನಾಂ ಜಪಯಜ್ಞೋಽಸ್ಮಿ") ಘೋಷಿಸಲ್ಪಟ್ಟ ಜಪಯಜ್ಞ, ಭಗವಂತನ ಒಲುಮೆಯನ್ನು ಗಳಿಸುವುದಕ್ಕೆ ಯುಕ್ತವಾದ ಸಾಧನವಾಗಿದೆ.

ವೇದಶಾಸ್ತ್ರಗಳಲ್ಲಿ, ಜಪಕ್ಕಾಗಿ ಗಾಯತ್ರೀಮಂತ್ರ, ಪ್ರಣವ ಮಂತ್ರ ಮತ್ತು ಷೋಡಶಾಕ್ಷರ ಮಂತ್ರಗಳು ಶ್ರೇಷ್ಠವಾದವುಗಳೆಂದು ಹೇಳಲಾಗಿದೆ. ಇವುಗಳಲ್ಲಿ ಗಾಯತ್ರೀ ಮಂತ್ರ ಮತ್ತು ಪ್ರಣವ ಮಂತ್ರಗಳು ಸರ್ವೋತ್ಕೃಷ್ಟವಾದವುಗಳಾಗಿದ್ದರೂ, ಅವುಗಳ ಯಶಸ್ಸಿಗೆ ಪರಿಪೂರ್ಣವಾದ ಜ್ಞಾನ ಮತ್ತು ಕಟ್ಟುನಿಟ್ಟಾದ ಅನುಷ್ಠಾನಗಳ ಅಗತ್ಯವಿದೆ. ಹಾಗೆ ನೋಡಿದಾಗ "ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ, ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ" ಎನ್ನುವ ಷೋಡಶಾಕ್ಷರ ಮಂತ್ರ ಶ್ರೇಷ್ಠತೆಯಲ್ಲೂ, ಸರಳತೆಯಲ್ಲೂ, ಸುಗಮತೆಯಲ್ಲೂ ಉಚ್ಚ ಮಟ್ಟದ್ದಾಗಿವೆ.

"ಕಲಿ ಸಂತರಣೋಪನಿಷತ್"ನಲ್ಲಿ ನಾರದ ಮಹರ್ಷಿಗಳು ಕಲಿಯುಗದಲ್ಲಿ ಸಂಸಾರಸಾಗರವನ್ನು ದಾಟುವುದಕ್ಕೆ ಸುಲಭ ಸಾಧ್ಯವಾದ ದಾರಿಯೊಂದನ್ನು ತಿಳಿಸುವಂತೆ ಬ್ರಹ್ಮದೇವನನ್ನು ಕೇಳುತ್ತಾರೆ. ಆಗ ಬ್ರಹ್ಮದೇವನು ಈ ಮಂತ್ರವನ್ನು ಬೋಧಿಸುತ್ತಾನೆ. ಜೊತೆಯಲ್ಲಿಯೇ, 'ಈ ಮಂತ್ರದ ಅನುಷ್ಠಾನಕ್ಕೆ ನಿರ್ದಿಷ್ಟವಾದ ವಿಧಿವಿಧಾನಗಳಾಗಲೀ, ಕಟ್ಟು ಪಾಡುಗಳಾಗಲೀ ಏನೂ ಇಲ್ಲ. ಯಾವ ಅವಸ್ಥೆಯಲ್ಲಾದರೂ ಭಕ್ತಿಯಿಂದ ಈ ಮಂತ್ರೋಚ್ಚಾರಣ ಮಾಡಬಹುದು. ಅದರಿಂದ ಮನುಷ್ಯನ ಚಿತ್ತವನ್ನು ಮುತ್ತಿದ ಅಜ್ಞಾನದ ಮೋಡಗಳು ಚದುರಿ ಹೋಗಿ ಸುಜ್ಞಾನದ ರವಿಕಿರಣಗಳು ಮಿನುಗುತ್ತವೆ. ಸಾಮೀಪ್ಯ ಸಾರೂಪ್ಯ ಸಾಯುಜ್ಯ ಮುಕ್ತಿಗಳೂ ದೊರೆಯುವುದಕ್ಕೆ ಸಹಾಯಕವಾಗುತ್ತವೆ' ಎಂದು ಹೇಳುತ್ತಾನೆ.



ಈ ಮಂತ್ರದ ತುಂಬ 'ಹರೇ', 'ರಾಮ' ಹಾಗೂ 'ಕೃಷ್ಣ' ಎಂಬೀ ಮೂರು ಪದಗಳು ತುಂಬಿಕೊಂಡಿವೆ. ಅವುಗಳ ಬಗ್ಗೆ ವಿವರವಾಗಿ ಚಿಂತಿಸುವುದು ಇಲ್ಲಿ ಯುಕ್ತವೆನಿಸುತ್ತದೆ.

"ಹರೇ" ಎಂಬುದು 'ಹರಿ' ಶಬ್ದದ ಸಂಬೋಧನಾತ್ಮಕ ರೂಪ. "ಹರಿ" ಎಂದರೇನು? -- "ಹರತಿ ಯೋಗಿನಾಂ ಚೇತಾಂಸಿ ಇತಿ ಹರಿಃ" ಯೋಗಿಗಳ ಮನಸ್ಸನ್ನು ಅಪಹರಿಸುವಂಥವನು ಹರಿ. ಮಾತ್ರವಲ್ಲ,

ಹರಿರ್ಹರತಿ ಪಾಪಾನಿ<br>
ದುಷ್ಟ ಚಿತ್ತೈರಪಿ ಸ್ಮೃತಃ<br>
ಅನಿಚ್ಛಯಾಪಿ ಸಂಸ್ಪೃಷ್ಟೋ<br>
ದಹತ್ಯೇವ ಹಿ ಪಾವಕಃ

ಹರಿನಾಮವು ಪಾಪಗಳನ್ನು ಹರಿಸುತ್ತದೆ. ವಿಶೇಷವಾದ ಶ್ರದ್ಧಾ ಭಕ್ತಿಗಳು ಇಲ್ಲದೇ ಉಚ್ಚರಿಸಿದರೂ ಹರಿನಾಮವು ಪಾಪವಿನಾಶಗೈಯುತ್ತದೆ-- ತಿಳಿದೇ ಇರಲಿ, ತಿಳಿಯದೇ ಇರಲಿ, ಬೆಂಕಿಯ ಸ್ಪರ್ಶ ಮಾಡಿದರೆ ಅದು ಸುಡದೆ ಇರುತ್ತದೆಯೇ? ಹಾಗೆ!

ಆದ್ದರಿಂದ ಹರಿಯೇ ಪರಬ್ರಹ್ಮ; ಹರಿಯೇ ಪರಮ ಗತಿ; ಹರಿಯೇ ಪರಮ ಮೋಕ್ಷ; ಹರಿಯ ಜ್ಞಾನವೇ ಪರಮ ಜ್ಞಾನ.

ಹರಿರೇವ ಪರಂ ಬ್ರಹ್ಮಾ<br>
ಹರಿರೇವ ಪರಾ ಗತಿಃ

ಹರಿರೇವ ಪರೋ ಮೋಕ್ಷಃ
ಹರಿರ್ಜ್ಞೇಯಃ ಸನಾತನಃ
ಯಸ್ಯ ಸ್ಮರಣ ಮಾತ್ರೇಣ
ಸರ್ವೇ ನಶ್ಯಂತಿ ಕಲ್ಮಷಾಃ
ಪುರುಷೋತ್ತಮಃ ಸ ಏವಾಯಂ
ಲೋಕೇ ಹರಿಃ ಪ್ರಕೀರ್ತತೇ

ಯಾರ ಸ್ಮರಣೆ ಮಾತ್ರದಿಂದ ಸಕಲ ಪಾಪಗಳು ನಾಶವಾಗುತ್ತವೆಯೋ ಅಂತಹ ಪುರುಷೋತ್ತಮನೇ ಲೋಕದಲ್ಲಿ "ಹರಿ" ಎಂಬುದಾಗಿ ಪ್ರಸಿದ್ಧನಾಗಿದ್ದಾನೆ.

ಸಕೃದುಚ್ಚರಿತಂ ಯೇನ
ಹರಿರಿತ್ಯಕ್ಷರದ್ವಯಂ
ಬದ್ಧಃ ಪರಿಕರಸ್ತೇನ
ಮೋಕ್ಷಾಯ ಗಮನಂ ಪ್ರತಿ
ಧನ್ಯೋಽತಶ್ಶುದ್ಧಃ ಪುರುಷಃ
ಕೃತ ಪಾಪೋಽನುರೂಪತಃ
ಪ್ರಾಯಶ್ಚಿತ್ತಂ ತು ತಸ್ಯೈಕಂ
ಹರಿಃ ಸ್ಮರಣಮುತ್ತಮಂ

ನಿರ್ಮಲ ಭಾವದಿಂದ ಏಕಾಗ್ರಮನಸ್ಕನಾಗಿ ಒಮ್ಮೆ 'ಹರಿ' ಎಂಬ ಎರಡಕ್ಷರವನ್ನುಚ್ಚರಿಸಿದರೆ ಸಾಕು, ಆತನಿಗೆ ಮೋಕ್ಷದ ಮಾರ್ಗ ತಾನೇ ತಾನಾಗಿ ತೆರೆದುಕೊಳ್ಳುತ್ತದೆ. ತನ್ನ ಪಾಪಕರ್ಮಗಳ ಪ್ರಾಯಶ್ಚಿತ್ತಕ್ಕಾಗಿ ಹರಿಸ್ಮರಣೆಯ ಉತ್ತಮ ಹಾದಿಯನ್ನು ತುಳಿದ ಆ ಶುದ್ಧ ಮನದ ಪುರುಷನೇ ನಿಜವಾಗಿ ಧನ್ಯನು.

ಇನ್ನು 'ರಾಮ' ಎನ್ನುವ ಶಬ್ದ. "ರಮಂತೇ ಯೋಗಿನೋಽಸ್ಮಿನ್ ಇತಿ ರಾಮಃ"-- ಯಾರಿಂದಾಗಿ ಯೋಗಿಗಳು ಆನಂದವನ್ನು ಹೊಂದುತ್ತಾರೋ ಅವನು ರಾಮ! "ರಮಂತೇ ಯೋಗಿನೋಽನಂತೇ ನಿತ್ಯಾನಂದೇ ಚಿದಾತ್ಮನಿ ಇತಿ ರಾಮ ಪದೇನಾಸೌ ಪರಂ ಬ್ರಹ್ಮಾಭಿಧೀಯತೇ" -- ಯಾವ ಅನಂತವಾದ, ಚಿದಾತ್ಮ ಪರಬ್ರಹ್ಮನಲ್ಲಿ ಯೋಗಿಗಣವು ನಿತ್ಯಾನಂದವನ್ನು ಪಡೆಯುತ್ತದೆಯೋ ಅವನೇ ರಾಮ!

ಏನೀ ರಾಮನಾಮದ ಮಹಿಮೆ ?

ರಾಮನಾಮ ಮಣಿದೀಪ ಧರೂ
ಜೀಹ್ ದೇಹರೀ ದ್ವಾರ್
ತುಲಸೀ ಭೀತರ್ ಬಾಹೆ ರಹೂಂ
ಜೌ ಚಾಹಸಿ ಏಜಿಯಾರ್

ದೇಹಕ್ಕೆ ಹೊಸ್ತಿಲಿನಂತಿರುವ ನಾಲಿಗೆಯ ಮೇಲೆ ರಾಮನಾಮವೆಂಬ ಮಣಿದೀಪವನಿಟ್ಟರೆ ಅಂತರಂಗಕ್ಕೂ ಬಹಿರಂಗಕ್ಕೂ ಬೆಳಕನ್ನು ಚೆಲ್ಲಿ ದೇಹದ ಒಳಗನ್ನೂ -- ಹೊರಗನ್ನು ನಿರ್ಮಲವಾಗಿಡುತ್ತದೆ ಎಂಬುದು ತುಲಸೀದಾಸರ ಅಭಿಪ್ರಾಯವಾದರೆ, "ರಾಮ ಮಂತ್ರದ ಜಪಿಸೋ ಹೇ ಮನುಜಾ" ಎಂದು ಕರೆನೀಡುವ ಪುರಂದರದಾಸರು ಅದು--

ಕುಲ ಹೀನನಾದರೂ ಕೂಗಿ ಜಪಿಸುವ ಮಂತ್ರ
ಜಲಪಾಣಿ ನಿತ್ಯ ಜಪಿಸುವ ಮಂತ್ರ
ಕಲುಷ ಪರ್ವತಕಿದು ಕುಲಿಷವಾಗಿಹ ಮಂತ್ರ
ಸುಲಭದಿಂದಲಿ ಮೋಕ್ಷ ಸೂರೆಗೊಂಬುವ ಮಂತ್ರ

ಎಂದು ನುಡಿಯುತ್ತಾರೆ.

ರಾಮನಾಮವು ಕಲ್ಪವೃಕ್ಷದ ಹಾಗೆ. ಪವಿತ್ರವಾದ ಅಂತಃಕರಣದಿಂದ ರಾಮ ಜಪ ಮಾಡಿದರೆ ಲೋಕದ ಸಮಸ್ತ ಸಿದ್ಧಿಗಳೂ ಪ್ರಾಪ್ತವಾಗುತ್ತವೆ. ಪಾವನ ಮನಸ್ಕನಾಗಿ ನಿತ್ಯ ರಾಮನಾಮಸ್ಮರಣೆ ಮಾಡುವಾತನಿಗೆ ಪರಮಶ್ರೇಷ್ಠವಾದ ಮೋಕ್ಷಪದವೂ, ಶ್ರೇಯಸ್ಕರವಾದ ಆತ್ಮಜ್ಞಾನವೂ ಖಂಡಿತ ಅಲಭ್ಯವಾಗಲಾರವು.

ಶ್ರೀರಾಮನಾಮ ಸಂಭೂತಂ
ಕಲ್ಪವೃಕ್ಷಸಮಂ ಪರಂ
ಯಸ್ಯಾನುಷ್ಠಾನತೋ ಲೋಕೇ
ಸರ್ವಸಿದ್ಧಿರ್ಭವೇನ್ನೃಣಾಮ್
ರಾಮನಾಮ್ನೋ ಜಪಾನ್ನಿತ್ಯಂ
ತೇಷಾಂ ಕಿಂಚಿನ್ನ ದುರ್ಲಭಂ
ಪರಂ ಮೋಕ್ಷಪ್ರದಂ ಶ್ರೇಷ್ಠಂ
ಆತ್ಮಜ್ಞಾನಪ್ರದಂ ನೃಣಾಮ್

ಅಂತೆಯೇ ಸೀತಾರಾಮರ ಕೃಪೆಗೆ ಪಾತ್ರನಾದವನು ಇಹಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ಶ್ರೇಷ್ಠವಾದ ಶ್ರೀರಾಮಚಂದ್ರನ ಭಕ್ತಿಸಾಮ್ರಾಜ್ಯದಲ್ಲಿ ಒಂದಾಗಿ ಹೋಗುತ್ತಾನೆ.

ಇಹಲೋಕೇ ಸುಖಂ ಭುಕ್ತ್ವಾ
ಸೀತಾರಾಮಪ್ರಸಾದತಃ
ಪ್ರಾಪ್ಯತೇ ರಾಮಚಂದ್ರಸ್ಯ
ಭಕ್ತಿಂ ಶ್ರೇಯಸ್ಕರೀಂ ಶುಭಂ

ಷೋಡಶಾಕ್ಷರ ಮಂತ್ರದಲ್ಲಿರುವ ಮೂರನೇ ಶಬ್ದ ಕೃಷ್ಣ. "ಕರ್ಷತಿ ಯೋಗಿನಾಂ ಮನಾಂಸಿ ಇತಿ ಕೃಷ್ಣಃ" --ಯೋಗಿಗಳ ಮನಸ್ಸನ್ನು ತನ್ನತ್ತ ಸೆಳೆಯುವವನೇ ಕೃಷ್ಣ!

ಕಿಂ ವಿದ್ಯಯಾ ಕಿಂ ಸ್ವಗುಣೈಶ್ಚ
ತೇಷಾಂ ಯಜ್ಞೈಶ್ಚ ದಾನೈಶ್ಚ

ತಪೋಭಿರುಗ್ರೈಃ
ಯೇಷಾಂ ನ ಭಕ್ತಿರ್ಭವತೀಹ
ಕೃಷ್ಣೇ ಜಗದ್ಗುರೌ ಮೋಕ್ಷಸುಖಪ್ರದೇ ಚ

ಜಗದ್ಗುರುವೂ, ಮೋಕ್ಷ -- ಸುಖ ಪ್ರದಾಯಕನೂ ಆದ ಶ್ರೀಕೃಷ್ಣನ ಮೇಲೆ ಭಕ್ತಿ ಇಲ್ಲದವನಿಗೆ ವಿದ್ಯೆಯಿಂದ, ಒಳ್ಳೆಯ ಗುಣಗಳಿಂದ, ಯಜ್ಞ--ದಾನ--ತಪಗಳಿಂದ ಈ ಲೋಕದಲ್ಲಿ ಏನು ಲಾಭ ಇದೆ?

ಕೃಷ್ಣೇ ರತಾಃ ಕೃಷ್ಣಮನುಸ್ಮರಂತಿ
ರಾತ್ರೌ ಚ ಕೃಷ್ಣಂ ಪುನರುತ್ಥಿತಾ ಯೇ
ತೇಽ ಭಿನ್ನ ದೇಹಾಃ ಪ್ರವಿಶಂತಿ ಕೃಷ್ಣಂ
ಹವಿರ್ಯಥಾ ಮಂತ್ರಹುತಂ ಹುತಾಶಮ್

ಶ್ರೀಕೃಷ್ಣನ ಧ್ಯಾನದಲ್ಲಿ ಮುಳುಗಿರುವ ಸಾಧಕರು ರಾತ್ರಿ ಮಲಗುವ ಮುಂಚೆ ಮತ್ತು ಬೆಳಿಗ್ಗೆ ಏಳುವ ಮುನ್ನ ಶ್ರೀಕೃಷ್ಣ ನಾಮ ಜಪವನ್ನು ಮಾಡಿದರೆ, ಅವರು ಶರೀರತ್ಯಾಗ ಮಾಡಿದೊಡನೆಯೇ ನೇರವಾಗಿ ಶ್ರೀಕೃಷ್ಣನ ಒಳಹೊಗುತ್ತಾರೆ -- ಮಂತ್ರೋಚ್ಚಾರಣೆಯೊಡನೆ ಹವಿಸ್ಸು ಯಜ್ಞಾಗ್ನಿಯನ್ನು ಸೇರಿಕೊಳ್ಳುವ ರೀತಿಯಲ್ಲಿ!

ಆದಿಪುರಾಣದಲ್ಲಿ ಸೂತ ಮಹಾಮುನಿಗಳು ಹೇಳುತ್ತಾರೆ :

ಮಧುರ ಮಧುರ ಮೇತತ್
ಮಂಗಲಂ ಮಂಗಲಾನಾಂ
ಸಕಲ ನಿಗಮವಲ್ಲೀ
ಸತ್ಫಲಂ ಸತ್ವರೂಪಂ
ಸಕೃದಪಿ ಪರಿಗೀತಂ
ಹೇಲಯಾ ಶ್ರದ್ಧಯಾ ವಾ
ಭೃಗುವರ ನರಮಾತ್ರಂ
ತಾರಯೇತ್ ಕೃಷ್ಣನಾಮ

ಯಾವ ಸಾಧಕನು ಶ್ರೀಕೃಷ್ಣ ಭಕ್ತಿಯೆಂಬ ಪುಣ್ಯರಸದಲ್ಲಿ ತನ್ನ ಮನವೆಂಬ ಮತ್ಸ್ಯವನ್ನು ವಿಹರಿಸಬಿಟ್ಟಿರುತ್ತಾನೋ ಅಂಥವನು, ಮಂಗಲಕರವಾದವುಗಳಿಗೇ ಮಂಗಲಕರವಾದ, ಸಮಸ್ತ ವೇದಶಾಸ್ತ್ರಾದಿಗಳ ಜ್ಞಾನವನ್ನು ತನ್ನೊಳಗು ಮಾಡಿಕೊಂಡಿರುವ, ಅತ್ಯಂತ ಮಧುರತಮವಾದ, ಸಚ್ಚಿದಾನಂದ ಸ್ವರೂಪೀ ಕೃಷ್ಣನಾಮವನ್ನೊಂದು ಬಾರಿ ಉಚ್ಚರಿಸುವುದರಿಂದಲೇ ಭವಸಾಗರದಿಂದ ಬಿಡುಗಡೆ ಹೊಂದಬಲ್ಲನು.

ಯಾವುದೇ ನಾಮಸ್ಮರಣೆಯಾದರೂ ತನ್ನ ಗುರಿ ಸಾಧಿಸಬೇಕಾದರೆ ಏಕಾಗ್ರಚಿತ್ತವಿರಬೇಕು; ಪವಿತ್ರ ಅಂತಃಕರಣವಿರಬೇಕು; ತನ್ಮಯತೆಯಿರಬೇಕು; ಮನಸ್ಸು -- ಮಾತು -- ಇಂದ್ರಿಯಗಳೆಲ್ಲ ಪರಮಪಿತನಲ್ಲಿ ಕೇಂದ್ರೀಕೃತವಾಗಬೇಕು. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದಂತೆ--

ಸಮೋಽ ಹಂ ಸರ್ವಭೂತೇಷು
ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ
ಯೇ ಭಜಂತಿ ತು ಮಾಂ ಭಕ್ತ್ಯಾ
ಮಯಿ ತೇ ತೇಷು ಚಾ ಪ್ಯಹಂ

"ನಾನು ಎಲ್ಲ ಪ್ರಾಣಿಗಳಲ್ಲಿ ಸಮಾನವಾಗಿ ವ್ಯಾಪ್ತನಾಗಿದ್ದೇನೆ. ಯಾರೂ ನನಗೆ ಅಪ್ರಿಯರಲ್ಲ; ಯಾರೂ ಪ್ರಿಯರಲ್ಲ. ಆದರೆ ನನ್ನನ್ನು ಭಕ್ತಿಯಿಂದ ಭಜಿಸುವಂಥವರು ನನ್ನೊಳಗೆ ಇರುತ್ತಾರೆ ಮತ್ತು ನಾನು ಅವರ ಅಂತಃಕರಣದಲ್ಲಿ ಪ್ರಕಟಗೊಳ್ಳುತ್ತೇನೆ".

ಆದ್ದರಿಂದ ಸರ್ವಸಮರ್ಪಣಭಾವದಿಂದ

"ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ"

ಎಂದು ಜಪಿಸಿದರೆ ಈ ಜನ್ಮದ ಲಕ್ಷ್ಯ ಸಾಧಿಸುವತ್ತ ಮುಂದಡಿ ಇಟ್ಟಂತೆಯೇ.

ಲಬ್ಧ್ವಾ ಸುದುರ್ಲಭಮಿದಂ
ಬಹು ಸಂಭವಂತೇ
ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ
ತೂರ್ಣಂ ಯತೇತ ನ
ಪತೇ ದನುಮೃತ್ಯು ಯಾವತ್--
ನಿಃಶ್ರೇಯಸಾಯ ವಿಷಯಃ
ಖಲು ಸರ್ವತಃ ಸ್ಯಾತ್

ಹಲವು ಜನ್ಮಗಳ ಪರಿಶ್ರಮಾನಂತರ ದೊರೆತಿರುವ ಮನುಷ್ಯ ಜನ್ಮದ ಮೌಲ್ಯವನ್ನರಿತ ಬುದ್ಧಿವಂತರು ಸಾಯುವುದಕ್ಕೆ ಮೊದಲು ಮೋಕ್ಷ ಪ್ರಾಪ್ತಿಯತ್ತ ಶೀಘ್ರ ಪ್ರಯತ್ನ ನಡೆಸುತ್ತಾರೆ. ಜೀವನದ ಗುರಿ ಭಗವತ್ಸಾಯುಜ್ಯವೇ ಆಗಿದೆ. ದುಃಖದಲ್ಲೇ ಪರ್ಯವಸಾನ ಹೊಂದುವ ವಿಷಯಭೋಗಗಳು ಯಾವ ಜನ್ಮದಲ್ಲಾದರೂ ದೊರೆಯುತ್ತವೆ.ಯ ಆದರೆ ಮನುಷ್ಯ ಜನ್ಮ ಅವೆಲ್ಲಕ್ಕಿಂತ ಉನ್ನತವಾದದ್ದು ಎಂಬುದನ್ನು ನಾವು ಅರ್ಥಮಾಡಿಕೊಂಡರೆ, ಈ ಷೋಡಶಾಕ್ಷರ ಮಂತ್ರ ಭಗವತ್ಪ್ರಾಪ್ತಿಗೆ ಹೇಗೆ ಮೆಟ್ಟಲಾಗಿ ನಿಲ್ಲಬಲ್ಲುದೆಂದು ತಿಳಿಯಬಹುದಾಗಿದೆ.



## ಸಪ್ತಗಿರಿ

### ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕವಿವರಗಳಿಗೆ :

**ಸಂಪಾದಕರು**
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭
ಚಿತ್ತೂರು ಜಿಲ್ಲೆ, ಆಂ. ಪ್ರ.

# ಮಹಾಲಕ್ಷ್ಮಿಯ ಆಗಮನ

---ಶ್ರೀಮತಿ ಸ. ನ. ಕಟ್ಟಿ.




ಸಿರಿದೇವಿಯು ಸರಸದಿ ಬಂದಳು ನಮ್ಮಮನೆಗೆ
ಸಿರಿಯನ್ನೆ ಸುರಿಸುತ ನಿಂದಳು ಪ

ಅಂದುಗೆ ಗೆಜ್ಜೆಯು ಘಲು ಘಲು ರೆನುತಲಿ
ಸುಂದರ ಪಾದದಿ ಹೆಜ್ಜೆಯ ನಿಡುತಲಿ
ಹೊಳೆವ ಪೈಜಣ ಝುಣಕು ಝುಣಕು ಎನೆ
ಮನ ಮೋಹಿಸುತ ಭಕ್ತರ ಮನೆಗೆ ೧

ಹೊನ್ನ ಹೊಳೆಯನು ಹರಿಸುತ ಬಂದಳು
ಜ್ಞಾನ ಪ್ರಭೆಯನು ತೋರುತ ನಿಂದಳು
ಕೋಟಿ ಸೂರ್ಯರ ತೇಜವ ಮೀರಿಸಿ
ರಾಮ ನರಸಿಯು ಸೀತಾ ಮಾತೆಯು ೨

ಭಾಗ್ಯದ ರಾಶಿಯ ಸುರಿಯುತ ಬಂದು
ಸೌಭಾಗ್ಯದ ನಿಧಿಯ ಉಡಿಯಲಿ ತಂದು
ಕಮಲಲೋಚನೆ ಕಮಲನಾಭನ ಪ್ರಿಯೆ
ಶ್ರೀನಿವಾಸನ ಚಂದ್ರ ಚಕೋರೆ ೩

ಶ್ವೇತ ಪೀತಾಂಬರ ಧರಿಸಿದವಳು
ರತ್ನ ಖಚಿತ ಮುಕುಟವ ನಿಟ್ಟವಳು
ಅರವಿಂದ ನಯನೆ ಅರುಣೋದಯದಲಿ
ಅರುಣಾಚಲೇಶನಿಂದ ದೊಡಗೂಡಿ ೪

ಕುಂಕುಮಾಂಕಿತಳು ಪಂಕಜ ಮುಖಿಯು
ಮೂಗುತಿಧರಳು ಮುಕುತಿಯ ನೀವಳು
ಕಂಕಣ ಕೈಯಲಿ ಭಕುತರ ಹರಸುತ
ಮುಗುಳು ನಗೆಯಲಿ ಜಗವನು ವರಿಸುತ ೫

ಮನದಂಗಳದ ಮಲ್ಲಿಗೆಯಂತೆ
ತಿಂಗಳ ಬೆಳಕಿನ ಚಂದ್ರಮನಂತೆ
ಭಕ್ತಿ ಭಾವದಿ ಸೇವೆ ಗೈವರಿಗೆ
ಕಾಮಧೇನುವೆ ತಾನಾಗಿಹೆನೆಂದು ೬

ಕೋಲಾಸುರನ ವಧಿಸಿದವಳು
ವ್ಯಾಘ್ರಪುರದಲಿ ನಿಂದವಳು
ವಾರೆ ನೋಟದಿ ವರಗಳ ನೀಡುತ
ಉಡುಪೀನಾಥನ ಪ್ರಿಯಕರಳು ೭

# ಜ್ಞಾನೋದಯ

---ಡಿ. ರಾಮಕೃಷ್ಣ ರಾವ್.

ಕಳಿಂಗರಾಜ ಶ್ರುತಪಾಲ. ತನ್ನ ಅಪಾರ ಸೈನ್ಯದೊಂದಿಗೆ ವಂಗದೇಶದ ಮೇಲೆ ವಂಡೆತ್ತಿ ಹೊರಟ. ದಾರಿಮಧ್ಯೆ ಅವರು ಒಂದು ರಾತ್ರಿ ಬೆಟ್ಟದ ತಪ್ಪಲಲ್ಲಿ ಕಳೆಯಬೇಕಾಯಿತು. ಶ್ರುತಪಾಲ ಮತ್ತು ಅವನ ಸೈನಿಕರು ಕೊರೆ ಕೊರೆವ ಚಳಿಯಲ್ಲಿ ಬೆಟ್ಟದ ತಪ್ಪಲಲ್ಲಿ ಬಿಡಾರ ಹೂಡಿದರು. ರಾತ್ರಿ ಕಳೆದು ಬೆಳಗಾಯಿತು. ಶ್ರುತಪಾಲ ಇನ್ನೇನು ತನ್ನ ಸೈನ್ಯದೊಂದಿಗೆ ಹೊರಡಲು ಅಣಿಯಾಗುತ್ತಿದ್ದ. ಅಷ್ಟರಲ್ಲೆ ಅಲ್ಲೊಂದು ದಿಬ್ಬದ ಮೇಲೆ ಚಳಿಯಿಂದ ನಡುಗುತ್ತಾ ಮಲಗಿರುವ ಸಾಧುವೊಬ್ಬನನ್ನು ಶ್ರುತಪಾಲ ನೋಡಿದ. ತತ್‌ಕ್ಷಣವೇ ಬಂದು ಉಣ್ಣೆಯ ಕಂಬಳಿಯನ್ನು ತಂದು ಆ ಸಾಧುವಿಗೆ ಹೊದಿಸಿದ. ದಿಗ್ಭ್ರಾಂತನಾಗಿ ಎಚ್ಚತ್ತು ಮೇಲೆದ್ದ ಸಾಧು "ನನ್ನ ಶರೀರವನ್ನು ರಕ್ಷಿಸಿಕೊಳ್ಳಲು ನನ್ನ ಬಳಿ ಒಂದು ಹೊದಿಕೆ ಇದೆ. ಅದನ್ನು ನಾನು ಸದಾ ತೊಟ್ಟಿರುತ್ತೇನೆ. ಆ ಹೊದಿಕೆ ನಾನು ಸಾಯುವಾಗಲು ನನ್ನ ಜೊತೆ ಬರುವಂತಹುದು. ನನಗೆ ನಿನ್ನ ಹೊದಿಕೆ ಬೇಡ" ಎಂದನು.

ಚಕಿತನಾದ ಶ್ರುತಪಾಲ "ನಿನ್ನ ಹೊದಿಕೆ ನನಗೆ ಕಾಣಿಸುತ್ತಾ ಇಲ್ಲವಲ್ಲ" ಎಂದನು.

ಆಗ ಸಾಧು ಕಿರುನಗೆ ಬೀರುತ್ತಾ "ಇಗೋ ನೋಡು! ಇದೇ ನನ್ನ ಹೊದಿಕೆ" ಎಂದು ತನ್ನ ಚರ್ಮವನ್ನು ಹಿಡಿದೆತ್ತಿ ತೋರಿಸಿ, ಇಷ್ಟೇ ಅಲ್ಲ, ಭಗವಂತನು ದಯಪಾಲಿಸಿರುವ ಈ ಹೊದಿಕೆ ಇರುವವರೆಗೂ ನನಗೆ ಬೇರೆ ಹೊದಿಕೆ ಬೇಡ. ಮತ್ತಾರಾದರೂ ಬಡವರಿದ್ದರೆ ಈ ಹೊದಿಕೆಯನ್ನು ಅವನಿಗೆ ಕೊಡಿ" ಎನ್ನುತ್ತಾ ಆ ಸಾಧು ಕಂಬಳಿಯನ್ನು ಶ್ರುತಪಾಲನಿಗೆ ಕೊಟ್ಟುಬಿಟ್ಟ.

"ನಿನಗಿಂತ ಕಡುಬಡುವ ಮತ್ತಾರು ಇರಲಿಕ್ಕೆ ಸಾಧ್ಯ?" ಎಂದು ಪ್ರಶ್ನಿಸಿದ ಶ್ರುತಪಾಲ.

ಸಾಧು ಕೆಲವು ಕ್ಷಣ ಮೌನವಾಗಿದ್ದು "ಈಗ ನೀವೆಲ್ಲಾ ಎಲ್ಲಿಗೆ ಹೊರಟಿದ್ದೀರಿ? ಯಾವ ಘನ ಕಾರ್ಯ ಮಾಡಲು ಹೊರಟಿದ್ದೀರಿ? ಎಂದು ಪ್ರಶ್ನಿಸಿದ.

"ವಂಗದೇಶವನ್ನು ನನ್ನ ದೇಶವನ್ನಾಗಿ ಸ್ವಾಧೀನಪಡಿಸಿಕೊಳ್ಳಲು ಹೋಗುತ್ತಿದ್ದೇವೆ" ಎಂದು ಉತ್ತರಿಸಿದ ಶ್ರುತಪಾಲ.

ಶ್ರುತಪಾಲನ ಮಾತು ಕೇಳಿದ ಸಾಧು ಖಿನ್ನನಾಗಿ "ಅಯ್ಯೋ! ಕ್ಷುಲ್ಲಕವಾದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಕೆಲವು ಸಾವಿರ ಮುಗ್ಧ ಜನರ ಪ್ರಾಣವನ್ನು ಬಲಿಕೊಡ ಹೊರಟಿದ್ದೀಯ? ಇದಕ್ಕೆಲ್ಲ ಕಾರಣ ನಿನ್ನನ್ನು ಆವರಿಸಿರುವ ಆಶೆ. ಇರುವಷ್ಟರಲ್ಲೇ ನಿನಗೆ ತೃಪ್ತಿ ಇಲ್ಲ. ಮತ್ತಷ್ಟು ಬೇಕು! ಮತ್ತಷ್ಟು ಬೇಕು! ಎಂಬ ದುರಾಶೆ ನಿನ್ನಲ್ಲಿ ತುಂಬಿ ತುಳುಕಾಡಿದೆ. ಆದ್ದರಿಂದ ಎಲ್ಲರಿಗಿಂತ ಬಡವ ನೀನೆ! ಈ ಕಂಬಳಿ ನನಗಿಂತ ನಿನಗೆ ಹೆಚ್ಚು ಅವಶ್ಯಕವಾಗಿದೆ. ತೃಪ್ತಿ ಎಂಬುದಿಲ್ಲದವನೇ ಕಡು ಬಡವ" ಎಂದು ಹೇಳಿದನು.

ಸಾಧುವಿನ ಮಾತುಗಳಿಂದ ಶ್ರುತಪಾಲನಿಗೆ ಜ್ಞಾನೋದಯವಾಯಿತು. ತತ್‌ಕ್ಷಣವೇ ಸೈನ್ಯವನ್ನು ರಾಜ್ಯಕ್ಕೆ ಹಿಂದಿರುಗಿಹೋಗುವಂತೆ ಆದೇಶಿಸಿದ. ಆ ಸಾಧು ಬೇರಾರು ಅಲ್ಲ ಸಾಕ್ಷಾತ್ ಭಗವಾನ್ ಬುದ್ಧನೇ ಎಂಬುದು ಶ್ರುತಪಾಲನಿಗೆ ತಿಳಿಯಲು ತಡವಾಗಲಿಲ್ಲ. ಅಂದಿನಿಂದ ತನ್ನ ರಾಜ್ಯವನ್ನೆಲ್ಲ ತ್ಯಜಿಸಿದ. ಶ್ರುತಪಾಲ ಬೌದ್ಧಧರ್ಮದ ಅನುಯಾಯಿಯಾದ.

"ಆಧಾರ"

# ನಟರಾಜ ಶಂಕರ

---ವಿದ್ವಾನ್ ರಘುಸುತ.

ಭಾರತದ ಆಧ್ಯಾತ್ಮಿಕ ಜಗತ್ತಿನಲ್ಲಿ ಭಗವಾನ್ ಶಂಕರನ ಸ್ಥಾನವು ಅಲೌಕಿಕವೂ, ಸರ್ವತ್ರ ವ್ಯಾಪ್ತವಾದುದೂ ಆಗಿದೆ. ಆದರೆ ಸಾಹಿತ್ಯ ಜಗತ್ತಿನಲ್ಲಿ ಇದಕ್ಕಿಂತಲೂ ಹೆಚ್ಚಿನ ಪ್ರಭಾವ ಈತನದ್ದು.

ಭಗವಾನ್ ಶಂಕರನು ನೃತ್ಯದ ಆದ್ಯ ಪ್ರವರ್ತಕನು. ಇದರಿಂದಲೇ ಈತನಿಗೆ 'ನಟರಾಜ' ಎನ್ನುವ ಹೆಸರು ಬಂದಿತು. ಭರತನ ನಾಟ್ಯಶಾಸ್ತ್ರದನುಸಾರ ಕೃತಯುಗದಲ್ಲಿ ನಾಟಕದ ಆರಂಭವಾಗಲಿಲ್ಲ. ಇದು ತ್ರೇತಾಯುಗದಲ್ಲಿ ದೃಷ್ಟಿಗೋಚರವಾಯಿತು. ಈ ಯುಗದಲ್ಲಿ 'ವಿಶ್ವ'ದಲ್ಲಿ ಬಹಳಷ್ಟು ಪರಿವರ್ತನೆಯಾಯಿತು. ಜನರಲ್ಲಿ ಕಾಮ, ಕ್ರೋಧ, ಲೋಭ, ಈರ್ಷ್ಯೆ ಇತ್ಯಾದಿ ಭಾವಗಳು ಅಸ್ತಿತ್ವಕ್ಕೆ ಬಂದವು ಗ್ರಾಮ್ಯಧರ್ಮದ ಪ್ರವೃತ್ತಿ ಹೆಚ್ಚಾಯಿತು. ಮನರಂಜನೆ ಎನ್ನುವುದು ಇರಲೇ ಇಲ್ಲ. ಇದು ದೇವತೆಗಳಿಗೆ ತುಂಬಾ ಅಪ್ರಿಯವೆನಿಸಿತು. ಈ ಲೋಪವನ್ನು ದೂರಮಾಡಲು ಮಹೇಂದ್ರಾದಿ ಪ್ರಮುಖ ದೇವತೆಗಳು ಪಿತಾಮಹನ ಬಳಿಗೆ ಹೋಗಿ, "ಭಗವನ್! ನಾವುಗಳು ದೃಶ್ಯ ಹಾಗೂ ಶ್ರವ್ಯಗಳೆರಡು ಇರುವ ಕ್ರೀಡೆಗಳನ್ನು ಆಡಬೇಕೆಂದಿದ್ದೇವೆ.

ಮಹೇಂದ್ರ ಪ್ರಮುಖೈರ್ದೇವೈ
ರುಕ್ತಃ ಕಿಲ ಪಿತಾಮಹಃ
ಕ್ರೀಡನೀಯಕ ಮಿಚ್ಛಾಮೋ ದೃಶ್ಯ
ಶ್ರವ್ಯಂ ಚ ಯದ್ ಭವೇತ್

ನಾಟ್ಯಶಾಸ್ತ್ರ ೧.



ನಿಮ್ಮಿಂದ ಪ್ರಚಾರಗೊಂಡ ವೇದಗಳು ಹಲವರಿಗೆ ಶ್ರವಣ ಯೋಗ್ಯವಲ್ಲ. ವೇದಗಳ ಉಪದೇಶಗಳಿಗೂ ಅವರು ಪಾತ್ರರಲ್ಲ. ಅವರು ಸರಸ ಹಾಗೂ ಸುಕುಮಾರ ನೀತಿಯ ಮುಖಾಂತರ ತಮ್ಮ ಕರ್ತವ್ಯವನ್ನು ಪಾಲಿಸುತ್ತಿರುವರು. ಆದುದರಿಂದ ಎಲ್ಲ ವರ್ಣಗಳಿಗೂ ಅನ್ವಯಿಸುವಂತ ವೇದವೊಂದನ್ನು ರಚಿಸು ದೇವ! ಎಂದು ಬೇಡಿಕೊಂಡರು.

ಋಗ್ವೇದವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎನ್ನುವ ದ್ವಿಜರಿಗೆ ಮಾತ್ರ ಉಪಯುಕ್ತವಾಗುವಂತಹುದು. ಆದುದರಿಂದ ಎಲ್ಲ ವರ್ಣದವರಿಗೂ ಅನ್ವಯವಾಗುವಂತಹ ಪಂಚಮ ವೇದವೊಂದನ್ನು ರಚನೆ ಮಾಡಬೇಕೆನ್ನುವುದೇ ದೇವಾಧಿದೇವತೆಗಳ ಬೇಡಿಕೆಯಾಗಿತ್ತು.

ಅದರಂತೆ ಬ್ರಹ್ಮನು ದೇವತೆಗಳ ಪ್ರಾರ್ಥನೆಯನ್ನು ಸ್ವೀಕರಿಸಿ, ನಾಲ್ಕೂ ವೇದಗಳಿಂದ ಒಂದೊಂದು ತತ್ವವನ್ನು ಸಂಗ್ರಹಿಸಿ, ಆ ನಾಲ್ಕೂ ತತ್ವಗಳಿಂದ ಸಂಪನ್ನಗೊಂಡ 'ನಾಟ್ಯವೇದ'ವನ್ನು ನಿರ್ಮಿಸಿದನು.

ಜಗ್ರಾಹ ಪಾಠ್ಯಮೃಗ್ವೇದಾತ್
ಸಾಮಭ್ಯೋ ಗೀತಮೇವ ಚ
ಯಜುರ್ವೇದಾ ದಭಿನಯಾನ್
ರಸಾನಾಥರ್ವಣಾದಪಿ

(ನಾಟ್ಯಶಾಸ್ತ್ರ 1/17)

'ಬ್ರಹ್ಮನು ಋಗ್ವೇದದಿಂದ ಪಠ್ಯವಸ್ತು, ಸಾಮವೇದದಿಂದ ಗೀತೆಗಳು, ಯಜುರ್ವೇದದಿಂದ ಅಭಿನಯ ಹಾಗೂ ಅಥರ್ವವೇದದಿಂದ ರಸಗಳನ್ನು ಸಂಗ್ರಹಿಸಿ, ಈ ನಾಲ್ಕೂ ತತ್ವಗಳಿಂದ ಸಂಪನ್ನಗೊಂಡ ನಾಟ್ಯವೇದದ ರಚನೆಯನ್ನು ಮಾಡಿದನು'.

ಶಾಸ್ತ್ರದ ರಚನೆಯ ನಂತರ, ಅದರ ನಿರ್ದಿಷ್ಟ ಅಭಿನಯದ ಪ್ರದರ್ಶನಕ್ಕಾಗಿ ಬ್ರಹ್ಮನು ಭರತ ಮುನಿಗೆ ಆದೇಶ ನೀಡಿದನು. ಅದರಂತೆ ಭರತ ಮುನಿಯು ತನ್ನ ಮಕ್ಕಳು ಹಾಗೂ ಅಪ್ಸರೆಯರ ಸಹಯೋಗದಿಂದ ಎರಡು ನಾಟಕಗಳನ್ನು ರಂಗಭೂಮಿಯಲ್ಲಿ ಪ್ರದರ್ಶಿಸಿದನು. ಅವುಗಳಲ್ಲಿ ಮೊದಲನೆಯದು ಅಮೃತ--ಮಥನ ಹಾಗೂ ಎರಡನೆಯದು ತ್ರಿಪುರ ದಹನ. ಪೂರ್ವರಂಗದ ವಿಧಿಗೆ ಅನುಗುಣವಾಗಿ ಪೂಜೆ ಹಾಗೂ ಅರ್ಚನೆಗಳನ್ನು ಮಾಡಿದ ನಂತರ ಸಾಕಷ್ಟು ಸಮಯವನ್ನು ತೆಗೆದುಕೊಂಡು,

ಉಚಿತ ಸಮಯದಲ್ಲಿ ಈ ಎರಡೂ ನಾಟಕಗಳನ್ನು ಅಭಿನಯಿಸಿದನು.

ಈ ಅಭಿನಯದ ದೃಷ್ಟಾರನ ರೂಪದಲ್ಲಿ ಸ್ವತಃ ಭಗವಾನ್ ಶಂಕರನೇ ಉಪಸ್ಥಿತನಿದ್ದು, ತನ್ನೊಂದಿಗೆ ಭೂತಗಣಗಳನ್ನೂ ಕರೆದು ತಂದಿದ್ದನು. ಆಗ ಭಗವಾನ್ ಶಂಕರನು ನಾಟಕಗಳನ್ನು ವೀಕ್ಷಿಸಿ ತುಂಬಾ ಸಂತೋಷಗೊಂಡನು. ಈ ನಾಟ್ಯದ ಸಮ್ಯಕ್ ಸೃಷ್ಟಿಯಿಂದ ಸಂತೋಷವೇನೊ ಆಯಿತು, ನಾಟಕದ ಪ್ರಯೋಗದಲ್ಲಿ ಯಥಾರ್ಥತೆಯೂ ಇದ್ದಿತು, ಆದರೆ ಇದರಲ್ಲಿ ಸ್ವಾರಸ್ಯ ಹಾಗೂ ಮನೋಹರತೆ ಕಡಿಮೆ ಇತ್ತು. ಏಕೆಂದರೆ ಇದರಲ್ಲಿ ನೃತ್ಯದ ಸ್ವಾರಸ್ಯಕರ ಸನ್ನಿವೇಶಗಳೇ ಇರಲಿಲ್ಲವಲ್ಲ ಎಂದು ಪಿತಾಮಹನೊಂದಿಗೆ ಹೇಳಿದನು.

ಈ ಅಭಾವವನ್ನು ತೊಡೆದು ಹಾಕುವ ಉಪಾಯವನ್ನು ಭಗವಾನ್ ಶಂಕರನು ಹೀಗೆಂದು ತಿಳಿಸಿದನು :

'ಮಯಾಪೀದಂ ಸ್ಮೃತಂ ನೃತ್ಯಂ
ಸಂಧ್ಯಾಕಾಲೇಷು ನೃತ್ಯತಾ
ನಾನಾ ಕರಣ ಸಂಯುಕ್ತೈಃ
ಅಂಗಹಾರೈರ್ವಿಭೂಷಿತಮ್
ಪೂರ್ವರಂಗವಿಧಾವಸ್ಮಿನ್
ತ್ವಯಾ ಸಮ್ಯಕ್ ಪ್ರಯೋಜ್ಯತಾಮ್'
(ನಾಟ್ಯಶಾಸ್ತ್ರ 4/13)

'ಸಂಧ್ಯಾ ಕಾಲದಲ್ಲಿ ನೃತ್ಯ ಮಾಡುವ ಸಮಯ ನಾನಾ ಕರಣಗಳಿಂದ ಕೂಡಿದ ಅಂಗಹಾರಗಳಿಂದ ವಿಭೂಷಿತನಾಗಿ ನೃತ್ಯ ಮಾಡುವೆನು. ಅದನ್ನು ಪೂರ್ವರಂಗದಲ್ಲಿ ಸೇರಿಸು. ಈ ಶುದ್ಧ ಪೂರ್ವರಂಗವು ಈ ನೃತ್ಯಾದಿ ಉಪಕರಣಗಳಿಂದ ಸಮನ್ವಿತಗೊಳಿಸಿದ ನಂತರ 'ಚಿತ್ರ' ಶಬ್ದದ ಮುಖಾಂತರ ಉಪಯೋಗಗೊಳಿಸಿಕೊಳ್ಳಿ'--

ಯಶ್ಚಾಯಂ ಪೂರ್ವರಂಗಸ್ತು
ತ್ವಯಾ ಶುದ್ಧಃ ಪ್ರಯೋಜಿತಃ
ಏತದ್ ವಿಮಿಶ್ರಿತಶ್ಚಾಯಂ
ಚಿತ್ರೋ ನಾಮ ಭವಿಷ್ಯತಿ
(ಭರತನ ನಾಟ್ಯಶಾಸ್ತ್ರ 4/15)

ಅಭಿನವ ಗುಪ್ತನು ಅಭಿನವ ಭಾರತಿಯಲ್ಲಿ ಈ ಶ್ಲೋಕದ ವ್ಯಾಖ್ಯಾನದಲ್ಲಿ ಹೀಗೆಂದು ಬರೆಯುತ್ತಾನೆ -- ಪ್ರಾರಂಭದಲ್ಲಿ ಅಭಿನಯದಲ್ಲಿ ರಂಜನೀಯತೆಯು ಅಂದರೆ ದರ್ಶಕರನ್ನು ಆಕರ್ಷಣೆಗೊಳಿಸುವ ಯೋಗ್ಯತೆಯು ಸ್ವಲ್ಪ ಮಾತ್ರವೇ ಇತ್ತು. ಆದರೆ ನಂತರದಲ್ಲಿ ನೃತ್ಯವನ್ನು ಸೇರಿಸಿದ ಮೇಲೆ ಈ ಅಭಿನಯವು ಅತಿಶಯವಾದ ರಂಜನೀಯತೆಯಿಂದ ಸಂಪನ್ನಗೊಂಡಿತು.

## ಪ್ರದೋಷದಂದು ಶಿವನೃತ್ಯ :

ಭಗವಾನ್ ಶಂಕರನು ಪ್ರದೋಷ ಕಾಲದಲ್ಲಿ ಢಮರುಗವನ್ನು ಬಾರಿಸುತ್ತಾ ಅತಿರೇಕ ಆನಂದದಲ್ಲಿ ತೊಡಗಿ ಜಗತ್ತನ್ನೇ ಆಹ್ಲಾದಗೊಳಿಸುವುದಕ್ಕಾಗಿ ನರ್ತಿಸುವನು. ಆತನ ನೃತ್ಯಕ್ಕೆ ಇದೇ ಸೂಕ್ತವಾದ ಕಾಲ ಎಂದು ಹೇಳಲಾಗುತ್ತದೆ. ಮಹಾಕವಿ ಕಾಳಿದಾಸನೂ ಕೂಡ 'ಮೇಘದೂತ'ದಲ್ಲಿ ಇದೇ ಸಮಯವನ್ನು ನಿರ್ದೇಶಿಸಿರುವನು.

ಅಪ್ಯನ್ಯಸ್ಮಿನ್ ಜಲಧರ
ಮಹಾಕಾಲಮಾಸಾದ್ಯ ಕಾಲೇ
ಸ್ಥಾತವ್ಯಂ ತೇ ನಯನವಿಷಯಂ
ಯಾವದತ್ಯೇತಿ ಭಾನುಃ
.............................................................
ಆಮಂದ್ರಾಣಾಂ ಫಲಮವಿಕಲಂ
ಲಭ್ಯತೇ ಗರ್ಜಿತಾನಾಮ್
(ಮೇಘದೂತ -- ಪೂರ್ವಮೇಘ ಶ್ಲೋಕ --38)

ಉಜ್ಜಯಿನಿಯಲ್ಲಿ ಮಹಾಕಾಳ ದೇವಸ್ಥಾನದಲ್ಲಿ ನಡೆಯುವ ಘಟನೆಯಿದು. ಯಕ್ಷನು ಮೇಘದೊಂದಿಗೆ ಹೀಗೆಂದು ತಿಳಿಸುವನು -- 'ಹೇ ಮೇಘವೇ! ನೀನು ಸಾಯಂಕಾಲದೊಳಗೆ ಮಹಾಕಾಲ ಮಂದಿರವನ್ನು ತಲುಪುವೆಯಾದರೆ ಅಲ್ಲಿಯೇ ನಿಲ್ಲು. ಸೂರ್ಯನು ಪೂರ್ತಿ ಕಣ್ಮರೆಯಾಗುವುದಕ್ಕೆ ಮುಂಚೆಯೇ, ಮಹಾದೇವನ ಸಾಯಂಕಾಲದ ಮಂಗಳಾರತಿ ಪ್ರಾರಂಭವಾಗುವುದರಿಂದ ಅದರ ಜೊತೆಗೆ ನೀನೂನು ನಿನ್ನ ಗರ್ಜನೆಯ ನಗಾರಿಯನ್ನು ಬಾರಿಸು. ಇದರಿಂದ ನಿನ್ನ ನಗಾರಿಯ ಧ್ವನಿಗೂ ಬೆಲೆ ಬಂದೀತು. ಅದರ ಸಂಪೂರ್ಣ ಫಲವೂ ನಿನಗೆ ದೊರೆಯುತ್ತದೆ'.

ಇದೇ ಸಮಯಕ್ಕೆ ಅನ್ವಯವಾಗುವಂತಹ ಕವಿಯ ಉಲ್ಲೇಖ ಹೀಗಿದೆ--

'ನೃತ್ತಾರಂಭೇ ಹರಪಶುಪತೇಃ--
ಅರ್ಧ ನಾಗಾಜಿನೇಚ್ಛಾಮ್'

ಇದರಿಂದ ಆ ಸಮಯವು ಭಗವಾನ್ ಶಂಕರನ ನೃತ್ಯಾರಂಭಕ್ಕೆ ಸೂಚನೆ ನೀಡುತ್ತದೆ.

## ನಾಟ್ಯದ ಮಹತ್ವ :

ಕಾಳಿದಾಸನೂ ಕೂಡ ಭರತ ಮುನಿಯ ಮುಖಾಂತರ ವರ್ಣಿಸಲ್ಪಟ್ಟಿರುವ ನಾಟ್ಯದ ಮಹತ್ವವನ್ನು ತನ್ನ ಈ ಹೇಳಿಕೆಯಿಂದ ಸಮರ್ಥಿಸಿಕೊಂಡಿರುವನು--

ದೇವಾನಾ ಮಿದಮಾಮನಂತಿ ಮುನಯಃ
ಶಾಂತಂ ಕ್ರತುಂ ಚಾಕ್ಷುಷಂ
ರುದ್ರೇಣೇದಮುಮಾಕೃತವ್ಯತಿಕರೇ
ಸ್ವಾಂಗೇ ವಿಭಕ್ತಂ ದ್ವಿಧಾ
ತ್ರೈಗುಣ್ಯೋದ್ಭವಮತ್ರ
ಲೋಕ ಚರಿತಂ ನಾನಾರಸಂ ದೃಶ್ಯತೇ
ನಾಟ್ಯಂ ಭಿನ್ನರುಚೇರ್ಜನಸ್ಯ
ಬಹುಧಾಪ್ಯೇಕಂ ಸಮಾರಾಧನಂ
(ಮಾಲವಿಕಾಗ್ನಿಮಿತ್ರಮ್ 1/4)

ಅಂದರೆ, ಈ ನಾಟ್ಯವು ದೇವತೆಗಳ ಕಣ್ಣುಗಳಿಗೆ ತಂಪನ್ನೀಯುವ ಯಜ್ಞವಾಗಿದೆ. ಪಾರ್ವತಿಯೊಂದಿಗೆ ಮದುವೆಯಾದ ನಂತರ ಶಂಕರನು ತನ್ನ ಶರೀರವನ್ನು ಎರಡು ಭಾಗ ಮಾಡಿ, ಒಂದನ್ನು ಲಾಸ್ಯ ಎಂಬ ಹೆಸರಿನಿಂದಲೂ, ಮತ್ತೊಂದನ್ನು ತಾಂಡವ ಎಂಬ ಹೆಸರಿನಿಂದಲೂ ಕರೆದನು. ಉದ್ಧತ ಹಾಗೂ ಆಕರ್ಷಕವಾದ ನೃತ್ಯವೇ ಶಂಕರನ ತಾಂಡವವಾಗಿದೆ. ಪಾರ್ವತಿಯ ನೃತ್ಯವೇ ಲಾಸ್ಯ ಇದು ಸುಕೋಮಲವೂ, ಮನೋಹರವಾದುದೂ ಆಗಿರುತ್ತದೆ. ಪ್ರಪಂಚದ ಮೂರೂ ಗುಣಗಳಿಂದ ಉತ್ಪನ್ನವಾದ ಅನೇಕ ರಸಗಳನ್ನು ಇಲ್ಲಿ ತೋರಿಸಲಾಗುತ್ತದೆ. ನಿಜ ಹೇಳಬೇಕೆಂದರೆ ಭಿನ್ನ ಅಭಿರುಚಿಯ ಜನಗಳಿಗಾಗಿ ಎಲ್ಲರಿಗೂ ಸಮಾನವಾದ ಆನಂದ ನೀಡುವ ನಾಟಕವೇ ಈ ಉತ್ಸವ.

ನಾಟ್ಯದ ಅಲೌಕಿಕ ಸರಸತೆ, ಸಾರ್ವಭೌಮತ್ವದ ಆಕರ್ಷಣೆ ಹಾಗೂ ಎಲ್ಲರಿಗೂ ಮನರಂಜನೆ ನೀಡುವುದಕ್ಕೆ ನಟರಾಜ ಶಂಕರನ ಮುಖಾಂತರ ಪ್ರದರ್ಶಿಸಲ್ಪಡುವ ನೃತ್ಯದ ಸನ್ನಿವೇಶವೇ ಕಾರಣವಾಗಿದೆ. ಶುದ್ಧ ಅಭಿನಯವನ್ನು ಚಿತ್ರ ಅಭಿನಯವನ್ನಾಗಿ ಪರಿವರ್ತಿಸಿದ ಶ್ರೇಯಸ್ಸು ಶಂಕರನಿಗೇ ಸೇರುತ್ತದೆ. ನಾಟ್ಯಶಾಸ್ತ್ರದಲ್ಲಿ ನೃತ್ಯದ ಪ್ರದರ್ಶನ ಕ್ರಿಯೆಯು ಅಂಗಹಾರಗಳ ಮುಖಾಂತರವೇ ನಡೆಯುತ್ತದೆ. ಅಂಗಹಾರಕ್ಕೆ ಮುಖ್ಯ ಸಹಾಯಕವಾಗಿರುವುದು 'ಕರಣ'ಗಳು. ಈ ಶಬ್ದದ ವ್ಯಾಖ್ಯಾನ ಮಾಡುತ್ತಾ ಭರತ ಮುನಿಯು ತಿಳಿಸುವ 'ಲಕ್ಷಣ ನಿರ್ದೇಶ'ವು ಈ ರೀತಿ ಇದೆ.

ಹಸ್ತಪಾದ ಸಮಾಯೋಗೋ
ನೃತ್ಯಸ್ಯ ಕರಣಂ ಮತಂ
(ಅದೇ 4/30)

ಸಾಮಾನ್ಯವಾಗಿ ಹಸ್ತ ಹಾಗೂ ಪಾದಗಳ ಸಮ್ಯಕ್ ಯೋಗವಾಗುವುದರಿಂದ 'ಕರಣ'ದ ನಿಷ್ಪ

ತ್ರಿಯಾಗುತ್ತದೆ. ಅಭಿನವ--ಭಾರತಿಯ ಅನುಸಾರ ಹಸ್ತ ಪಾದಗಳ ಇಲ್ಲಿನ ಪ್ರಯೋಗವನ್ನು ವಿಸ್ತೃತ ಅರ್ಥದಲ್ಲಿ ಮಾಡಲಾಗಿದೆ. 'ಹಸ್ತ' ಎನ್ನುವುದರ ಅರ್ಥವು ಕೇವಲ ಕೈ ಮಾತ್ರವೇ ಆಗದೆ 'ಮೇಲ್ಭಾಗದ ಶರೀರ' ಎಂದಾಗಿದೆ. ಅಂತೆಯೇ ಪಾದವೆಂದರೆ ಶರೀರದ ಉಳಿದ ಭಾಗ ಎಂದರ್ಥವಾಗಿದೆ. ಇದರಲ್ಲಿ ಪಾರ್ಶ್ವ ಕಟಿ, ಊರು, ಜಂಘಾ ಹಾಗೂ ಪಾದಗಳು ಸಮಾವೇಶಗೊಂಡಿರುತ್ತವೆ. ಇವೆರಡರ ಸಂಯುಕ್ತ ಕ್ರಿಯೆಯೇ ಮೇಲೆ ತಿಳಿಸಿದ ಪಾರಿಭಾಷಿಕ ಶಬ್ದವಾಗಿದೆ.

ಪೂರ್ವಕ್ಷೇತ್ರ ಸಂಯೋಗತ್ಯಾಗೇನ
ಸಮುಚಿತ ಕ್ಷೇತ್ರಾಂತರ ಪ್ರಾಪ್ತಿ
ಪರ್ಯಂತತಯಾ
ಏಕಾ ಕ್ರಿಯಾ ತತ್ ಕರಣಮಿತ್ಯರ್ಥಃ
ಹಸ್ತೋಪಲಕ್ಷಿತಸ್ಯ ಚಾ ಪರಕಾಯಗತ
ಪಾರ್ಶ್ವ ಕಟ್ಯೂರೂಜಂಘಾ ಚರಣಾದೇಃ
ಸಂಗತತಯಾ ತ್ರುಟಿ ತತ್ಸೇನಾವೃತ್ತಿಯೋಜನೇ
ಪೂರ್ವಕ್ಷೇತ್ರ ಸಂಯೋಗತ್ಯಾಗೇನ ಸಮುಚಿತ
ಕ್ಷೇತ್ರಾಂತರ ಪ್ರಾಪ್ತಿ ಪರ್ಯಂತತಯಾ
ಏಕಾ ಕ್ರಿಯಾ ತತ್ ಕರಣಮಿತ್ಯರ್ಥಃ
ಉತ್ತರಸಂಯೋಗಾಂತಂ ಸರ್ವತ್ರ ಕರ್ಮ
(ನಾಟ್ಯಶಾಸ್ತ್ರ 4/30ವ ಅಭಿನವ ಭಾರತೀ)

೧೦೮ ರೀತಿಯ ಕರಣಗಳಿವೆ. ಇವುಗಳಲ್ಲಿ ಮೊದಲನೆಯದರ ಹೆಸರು 'ತಲಪುಷ್ಪ ಪುಟ' ಹಾಗೂ ಕೊನೆಯದರ ಹೆಸರು 'ಗಂಗಾವತರಣ' ಎಂಬುದು.

ಮೂಲತಃ ಈ ಸಮಗ್ರ ಕರಣಗಳನ್ನು ಕೋಪೆರುಂಜೇದೇವ ಎನ್ನುವ ತಮಿಳುನಾಡು ಅರಸನ ಮುಖಾಂತರ (ಕ್ರಿ.ಶ. , ೧೨೪೩ ರಿಂದ ೧೨೭೨) ಚಿದಂಬರದ ನಟರಾಜ ದೇವಾಲಯದ ಗೋಪುರದಲ್ಲಿ ಬೇರೆ ಬೇರೆ ವಿಗ್ರಹ ರೂಪದಲ್ಲಿ ಕೆತ್ತಿ, ಸ್ಥಾಪಿಸಲಾಗಿದೆ. ಇವುಗಳಲ್ಲಿ ಈಗ ಕೇವಲ ೯೩ ಕರಣಗಳು ಮಾತ್ರ ಉಪಲಬ್ಧವಾಗಿವೆ. ಉಳಿದ ೧೫ ಕರಣಗಳು ಕಣ್ಮರೆಯಾಗಿವೆ. ಶ್ಲೋಕಗಳಿಂದ ಕೂಡಿರುವುದರಿಂದ ಇವುಗಳನ್ನು ಬಹಳ ಚೆನ್ನಾಗಿ ಗುರ್ತಿಸಬಹುದು.

ಈ ಕರಣಗಳಿಂದ ಕೂಡಿರುವ ಅಂಗವಿಕ್ಷೇಪಗಳು ೩೨ ಇವೆ. ಇವುಗಳ ಹೆಸರು ಹಾಗೂ ಲಕ್ಷಣಗಳನ್ನು ನಾಟ್ಯಶಾಸ್ತ್ರದಲ್ಲಿ ನೀಡಲಾಗಿದೆ. ಮೊದಲಿನ ಅಂಗಹಾರದ ಹೆಸರು 'ಸ್ಥಿರ ಹಸ್ತ' ಎಂದಾಗಿದ್ದು, ಕಡೆಯ ಹೆಸರು 'ಅರ್ಧನಿಕುಟ್ಟಕ' ಎಂದಾಗಿದೆ. ಇವುಗಳ ಸಮ್ಮಿಳನದಿಂದ ನಾಲ್ಕು 'ರೇಚಕ'ಗಳು ಉಂಟಾಗಿವೆ. ರೇಚಕ ಎಂದರೆ ಚಲನೆ ಎಂದರ್ಥ. ನಾಲ್ಕು ವಿಶಿಷ್ಟ ಅಂಗಗಳನ್ನು ಚಲಿಸುವಂತೆ ಮಾಡುವುದರ ಕಾರಣ ೧. ಪಾದರೇಚಕ, ೨. ಕಟಿರೇಚಕ, ೩. ಕರ ರೇಚಕ ಹಾಗೂ ೪. ಕಂಠರೇಚಕ ಎನ್ನುವ ನಾಲ್ಕು ರೇಚಕಗಳಿವೆ.

ಇವಿಷ್ಟೂ ಸಮಗ್ರ ಅಂಗಹಾರಗಳು ಹಾಗೂ ರೇಚಕಗಳಿಂದ ಕೂಡಿದ ಲಯ ಹಾಗೂ ತಾಳಗಳಿಗೆ ವಶನಾಗಿ ಭಗವಾನ್ ಶಂಕರನು ದಕ್ಷಯಜ್ಞವನ್ನು ನಷ್ಟಗೊಳಿಸಲು ಡಿಂಡಿಮ, ಗೋಮುಖಿ, ಪಣವ -- ಇತ್ಯಾದಿ ವಾದ್ಯಗಳನ್ನು ನುಡಿಸುತ್ತಿರುವುದರ ಸಂಗಮದಿಂದ ಸಂಧ್ಯಾಕಾಲದಲ್ಲಿ ನಡೆಸಿದ ನೃತ್ಯವೇ 'ತಾಂಡವ'ವಾಗಿದೆ. ಪ್ರಪಂಚದಲ್ಲಿ ಸಂಭವಿಸಿದ ಪ್ರಪ್ರಥಮ 'ತಾಂಡವ ನೃತ್ಯ'ವಿದು. ಭಗವಾನ್ ಶಂಕರನ ಆಜ್ಞೆಯಂತೆ ಆತನ ಪ್ರಮುಖ ಗಣನಾದ 'ತಂಡು' ಎನ್ನುವವನು ಈ ಎಲ್ಲ ನೃತ್ಯಾಂಶಗಳನ್ನು ಅಭಿನಯಕ್ಕೆ ಅಳವಡಿಸಿ ಭರತಮುನಿಗೆ ನೀಡಿದನು. ತಂಡುವಿನಿಂದ ನೀಡಲ್ಪಟ್ಟ ನೃತ್ಯಾಂಶವಾದುದರಿಂದ ಇದಕ್ಕೆ 'ತಾಂಡವ' ಎಂಬ ಹೆಸರು ಬಂದಿತು. ಅಭಿನವಗುಪ್ತನು ತನ್ನ ಟೀಕೆಯಲ್ಲಿ 'ತಂದು' ಎನ್ನುವುದು ಪರಶಿವನ ಪ್ರಖ್ಯಾತ ಗಣನಾಥ 'ನಂದಿ'ಯ ಮತ್ತೊಂದು ಹೆಸರು ಎಂದು ತಿಳಿಸಿದ್ದಾನೆ. ಭಗವಾನ್ ಶಂಕರನ ಆದೇಶದ ಮೇರೆಗೆ ಭರತ ಮುನಿಯು ಇವುಗಳ ಸಮುಚಿತ ಪ್ರಯೋಗವನ್ನು ಅಭಿನಯದೊಂದಿಗೆ ಜೋಡಿಸಿ, ಅದನ್ನು ಆಕರ್ಷಕ, ಮನೋರಂಜಕವನ್ನಾಗಿ ಬದಲಾಯಿಸಿದ. ಇದೇ ನೃತ್ಯಗಳ ಕರ್ತೃವು ಭಗವಾನ್ ಶಂಕರನಾದುದರಿಂದ ಆತನನ್ನು 'ನಟರಾಜ' ಎನ್ನುವ ಅಭಿದಾನದಿಂದ ಪ್ರಖ್ಯಾತನಾಗಿದ್ದಾನೆ. ಅಂತೆಯೇ ನಾಟ್ಯದ ಆದ್ಯಪ್ರವರ್ತಕನಾದುದರಿಂದ--

ಆಂಗಿಕಂ ಭುವನಂ ಯಸ್ಯ
ವಾಚಿಕಂ ಸರ್ವ ವಾಙ್ಮಯಮ್
ಆಹಾರ್ಯಂ ಚಂದ್ರತಾರಾದಿ
ತಂ ನಮಃ ಸಾತ್ವಿಕಂ ಶಿವಮ್
(ಅಭಿನಯದರ್ಪಣ)

ಎಂದು ಭಗವಾನ್ ಶಂಕರನನ್ನು ಗೌರವಿಸಲಾಗಿದೆ.

ಆದ್ಯ ನರ್ತಕನೂ ಹಾಗೂ ಅಭಿನಯದ ಸಾಕಾರ ರೂಪನೂ ಆದ ನಟರಾಜನನ್ನು ವರ್ಣಿಸುವ ವಿವರಗಳು ಅನೇಕ ಸಂಸ್ಕೃತ ಗ್ರಂಥಗಳಲ್ಲಿ ಉಪಲಬ್ಧವಿವೆ.

ಪಾದಸ್ಯಾವಿರ್ಭವಂತೀ ಮವನತಿ ಮವನೇಃ
ರಕ್ಷತಃ ಸ್ವೈರಪಾತ್ಯೈಃ
ಸಂಕೋಚೇನೈವ ದೋಷ್ಣಾಂ ಮುಹು-
ರಭಿನಯತಃ ಸರ್ವಲೋಕಾತಿ ಗಾನಾಮ್
ದೃಷ್ಟಿಂ ಲಕ್ಷ್ಯೇಷು ನೇತ್ರಂ ಜ್ವಲನ-
ಕಣಮುಚಂ ಬಧ್ನತೋ ದಾಹಭೀತೇ
ರಿತ್ಯಾಧಾರಾನು ರೋಧಾತ್ ತ್ರಿಪುರ ವಿಜಯಿನಃ
ಪಾತು ವೋ ದುಃಖ ನೃತ್ಯಮ್
(ಮುದ್ರಾರಾಕ್ಷಸ 1/2)

'ಭಗವಾನ್ ಶಂಕರನು ಸಂಪೂರ್ಣವಾಗಿ ಸಂತೋಷಗೊಂಡು ಪೃಥ್ವಿಯ ಮೇಲೆ ತನ್ನ ಪಾದದಿಂದ ತಾಡನ ಮಾಡಿದ. ಆಗ ಪೃಥ್ವಿಯು ಕುಸಿದು ಹೋಗುವ ಸಂಶಯ ಉಂಟಾಯಿತು. ಆದುದರಿಂದ ಅದು ಹಾಗೆ ಕುಸಿಯದಂತೆ ಅದನ್ನು ರಕ್ಷಿಸುತ್ತಾ ನಾಟ್ಯವಾಡಿದ. ಸಮಸ್ತ ಲೋಕಗಳಲ್ಲೂ ಹರಡುವ ತನ್ನ ಭುಜಗಳನ್ನು ಸಂಕೋಚಗೊಳಿಸುತ್ತ ಆತನು ಅಭಿನಯ ಮಾಡಿದ. ಇಲ್ಲದಿದ್ದಲ್ಲಿ ಆ ಲೋಕಗಳು ಭುಜಗಳ ಪೆಟ್ಟಿನಿಂದ ಭಿನ್ನ ಭಿನ್ನವಾಗಿ ಬಿಡುತ್ತಿದ್ದವು. ಈಶ್ವರನ ಮೂರನೇ ಕಣ್ಣಿನಿಂದ ಅಗ್ನಿಯ ಜ್ವಲಂತ ಕಣಗಳು ಹೊರಬಂದಲ್ಲಿ, ಅವು ಲೋಕವನ್ನೆ ಎಲ್ಲಿ ಸುಟ್ಟು ಹಾಕಿ ಬಿಡುವುವೊ ಎನ್ನುವ ಭಯದಿಂದ ಶಂಕರನು ತನ್ನ ಆ ದೃಷ್ಟಿಯನ್ನು ನಿಲ್ಲಿಸಿ, ಮೂರನೇ ಕಣ್ಣನ್ನು ಮುಚ್ಚಿಕೊಂಡು ನೃತ್ಯ ಮಾಡುವನು. ಈ ರೀತಿಯಲ್ಲಿ ವಿಶ್ವದ ಆಧಾರಗಳಿಗೆ ಯಾವುದೇ ರೀತಿಯ ಆಘಾತವನ್ನೂ ಉಂಟು ಮಾಡದೆ, ಸ್ವಚ್ಛಂದ ರೀತಿಯಲ್ಲಿ ನರ್ತಿಸದೆ, ನಿಯಂತ್ರಿತ ರೀತಿಯಲ್ಲಿ ಆತ ನರ್ತಿಸುವನು. ತ್ರಿಪುರದ ಮೇಲೆ ವಿಜಯ ಸಾಧಿಸಿದ ಭಗವಾನ್ ಶಂಕರನ ದುಃಖ ಕೂಡಿದ (ದಕ್ಷಯಜ್ಞದ) ನೃತ್ಯವು ನಿಮ್ಮನ್ನೆಲ್ಲ ರಕ್ಷಿಸಲಿ'.

ಈ ರೀತಿಯಲ್ಲಿ ಈಶ್ವರನ ತಾಂಡವವು ಜಗತ್ ಕಲ್ಯಾಣದಲ್ಲಿ ಪ್ರವೃತ್ತಗೊಂಡಿತು. ನಟರಾಜನ ನರ್ತನವು ಜಗತ್ ಸೃಷ್ಟಿಗಾಗಿ ಆಗುವಂತಹುದು; ಅನೇಕರು ತಿಳಿದಿರುವಂತೆ ಅದರ ಸಂಹಾರಕ್ಕಾಗಿ ಅಲ್ಲ. ನಟರಾಜನ ಇದೇ ರೀತಿಯ ಕಲ್ಪನೆಯು ಪುರಾಣಗಳಲ್ಲಿ ಹಾಗೂ ಕಾವ್ಯಗ್ರಂಥಗಳಲ್ಲಿ ಬಹಳಷ್ಟು ವರ್ಣಿಸಲ್ಪಟ್ಟಿದೆ. ಅಲ್ಲದೆ ಭಗವಾನ್ ಶಂಕರನನ್ನು 'ನೃತ್ತ' ಹಾಗೂ 'ನಾಟ್ಯ'ದ ಆದ್ಯ ಪ್ರವರ್ತಕನೆಂದು ನಂಬಲಾಗಿದೆ. ಸಾಹಿತ್ಯ ಜಗತ್ತಿಗೆ ನಟರಾಜನ ಈ ಕೊಡುಗೆಯು ಸರ್ವಥಾ ಸ್ಮರಣೀಯವೂ, ಅಭಿನಂದನೀಯವೂ ಆಗಿರುತ್ತದೆ.

## ನಟರಾಜ ಉಪಾಧಿಯ ರಹಸ್ಯ :

ಈಶ್ವರನಿಗೆ ನಟರಾಜ ಎನ್ನುವ ಪ್ರಶಸ್ತಿ ಬಂದುದು ಹೇಗೆ? ಇದಕ್ಕೊಂದು ಐತಿಹ್ಯವಿದೆ.

ಜಗತ್ ಸೃಷ್ಟಿಯ ನಂತರದ ಸಮಯವದು. ಅದು ಪ್ರದೋಷಕಾಲ. ದೇವಾದಿ ದೇವತೆಗಳು ರಜತಗಿರಿ ಕೈಲಾಸ ಪರ್ವತದ ಮೇಲೆ ಸೇರಿದರು. ಭಗವಾನ್ ಶಂಕರನ ತಾಂಡವಕ್ಕೆ ಎಲ್ಲ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ವೇಪ್ಕಾರ್.

ಸಿದ್ಧತೆಗಳೂ ನಡೆದುವು. ಜಗಜ್ಜನನಿಯಾದ ಆದ್ಯಾ ಶ್ರೀ ಗೌರಿಯು ರತ್ನಸಿಂಹಾಸನದಲ್ಲಿ ಆಸೀನಳಾಗಿ ತನ್ನ ಅಧ್ಯಕ್ಷತೆಯಲ್ಲಿ ತಾಂಡವ ನೃತ್ಯ ನಡೆಸುವ ವೈಭೋಗಕ್ಕೆ ಸಜ್ಜಾದಳು. ಅದೇ ಸಮಯಕ್ಕೆ ನಾರದರು ಅಲ್ಲಿಗೆ ಬಂದು, ಆ ಸಿದ್ಧತೆಗಳಲ್ಲಿ ಸಮ್ಮಿಳಿತರಾದರು. ತಮ್ಮ ವೀಣೆಯನ್ನು ಶ್ರುತಿ ಮಾಡಿಕೊಂಡು, ಗೋಷ್ಠೀಗಾನ ಮೇಳದಲ್ಲಿ ಒಂದಾದರು. ಆ ನಂತರ ಶಿವನ ತಾಂಡವ ನೃತ್ಯ ಪ್ರಾರಂಭವಾಯಿತು. ಸರಸ್ವತಿಯು ವೀಣೆಯನ್ನು ನುಡಿಸತೊಡಗಿದಳು. ಇಂದ್ರನು ವೇಣುವನ್ನು ನುಡಿಸತೊಡಗಿದ. ಬ್ರಹ್ಮನ ತಾಳ ವಾದ್ಯವನ್ನು ಬಾರಿಸತೊಡಗಿದ. ಲಕ್ಷ್ಮಿಯು ಹಾಡುಗಳನ್ನು ಹಾಡತೊಡಗಿದಳು. ವಿಷ್ಣುವು ಮೃದಂಗವಾದನದಲ್ಲಿ ತೊಡಗಿದ. ಉಳಿದ ದೇವಗಣ ಹಾಗೂ ಗಂಧರ್ವ, ಯಕ್ಷ ಕಿನ್ನರ, ಪನ್ನಗ, ಉರಗ, ಸಿದ್ಧ, ವಿದ್ಯಾಧರ, ಅಪ್ಸರೆಯರೆಲ್ಲರೂ ನಾಲ್ಕೂ ಕಡೆಗಳಿಂದ ಸ್ತುತಿಪಾಠ ಮಾಡತೊಡಗಿದರು. ಅತ್ಯಂತ ಆನಂದಮಯ ಸನ್ನಿವೇಶದಲ್ಲಿ ತಾಂಡವವು ಮುಂದುವರಿಯಿತು.

ಅದೇ ಸಮಯದಲ್ಲಿ ಆದ್ಯಾ ಭಗವತೀ (ಮಹಾಕಾಳೀ) ಪಾರ್ವತಿಯು ಬಹಳಷ್ಟು ಪ್ರಸನ್ನಗೊಂಡು (ಮಹಾಕಾಳ) ಶಿವನನ್ನು 'ನಿಮಗೇನು ಬೇಕು? ಇಂದು ತುಂಬಾ ಸಂತೋಷವಾಗಿದೆ' ಎಂದು ಕೇಳಿದಳು. ಆಗ ಎಲ್ಲ ದೇವತೆಗಳಿಂದ, ವಿಶೇಷವಾಗಿ ನಾರದರಿಂದ ಪ್ರೇರಿತನಾಗಿ 'ಹೇ ದೇವಿ! ಈ ಆನಂದವನ್ನು ನಾವು ಮಾತ್ರವಷ್ಟೆ ಅನುಭವಿಸುತ್ತಿದ್ದೇವೆ. ಭೂತಲದಲ್ಲಿ ಸಾವಿರಾರು ಭಕ್ತರಿದ್ದಾರೆ. ಅವರು ಈ ಆನಂದ ಹಾಗೂ ನೃತ್ಯದರ್ಶನದಿಂದ ವಂಚಿತರಾಗಿದ್ದಾರೆ. ಆದುದರಿಂದ ಮೃತ್ಯು (ಮರ್ತ್ಯ) ಲೋಕದಲ್ಲಿನ ಮಾನವರೂ ಈ ಆನಂದವನ್ನು ಅನುಭವಿಸುವರಿತೆ ಮಾಡು. ನಾನೀಗ ತಾಂಡವವನ್ನು ಸಮಾಪ್ತಗೊಳಿಸಿ, ಲಾಸ್ಯವನ್ನು ಮಾಡುವೆನು' ಎಂದು ಪರಶಿವನು ನುಡಿದನು.

ಇದನ್ನು ಆಲಿಸಿ ಶ್ರೀ ಆದ್ಯಾ ಭುವನೇಶ್ವರಿ ಮಹಾಕಾಳಿಯೂ 'ಏವಂ ಅಸ್ತು' ಎಂದು ಹೇಳಿದಳು. ಅಂತೆಯೇ ಆಕೆಯು ಶ್ಯಾಮಸುಂದರನ ಅವತಾರವನ್ನು ಪಡೆದು, ವೃಂದಾವನ ಧಾಮವನ್ನು ಪ್ರವೇಶಿಸಿದಳು. ಮಹಾಕಾಳ ಪರಮಶಿವನು ರಾಧೆಯಾಗಿ ಅವತರಿಸಿ ವ್ರಜದಲ್ಲಿ ಜನ್ಮವೆತ್ತಿದಳು. ಅಲ್ಲಿ ದೇವ ದುರ್ಲಭವಾದ ರಾಸಮಂಡಲ (ನೃತ್ಯ)ವನ್ನು ಯೋಜಿಸಿದಳು. ಅಲ್ಲಿಯೇ 'ನಟರಾಜ' ಎನ್ನುವ ಉಪಾದಿಯನ್ನು ನೀಡಲಾಯಿತು.

ಈ ಕಥಾನಕದಿಂದ ಗೊತ್ತಾಗುವ ಅಂಶವೆಂದರೆ ಈಶ್ವರ, ಪಾರ್ವತಿ (ಆದಿಶಕ್ತಿ), ಮಹಾವಿಷ್ಣು, ಲಕ್ಷ್ಮಿ --ಇವರೆಲ್ಲರೂ ಆದಿಶಕ್ತಿಯೊಂದರ ಆದಿಮೂಲದ ಬೇರೆ ಬೇರೆ ರೂಪಗಳು ಎಂದೇ ಅರ್ಥವಾಗುತ್ತದೆ.

* * * * *

(ಸಾಧಾರ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ದೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ವಾರ್ತಾಲಹರಿ

## ಅಂಗವಿಕಲರ ಆಟೋಟಸ್ಪರ್ಧೆಯಲ್ಲಿ ತಿ.ತಿ.ದೇ. ಸಂಸ್ಥೆಯ ಸಾಧನೆ

ಈ ಹಿಂದೆ ನಡೆದ ಅಂಗವಿಕಲರ 34 ನೇ ರಾಷ್ಟ್ರೀಯ ದಿನೋತ್ಸವದ ಸಂದರ್ಭದಲ್ಲಿ ಶ್ರೀ ವೆಂಕಟೇಶ್ವರ ವಿಕಲಾಂಗ ಶಿಕ್ಷಣ ಉತ್ಪತ್ತಿ ಕೇಂದ್ರದ ವತಿಯಿಂದ 60 ಮಂದಿ ಅಂಗವಿಕಲ ಶಿಕ್ಷಣಾರ್ಥಿಗಳು ಪಾಲುಗೊಂಡಿದ್ದರು.

ಇವರಲ್ಲಿನ 46 ಮಂದಿ ವಿದ್ಯಾರ್ಥಿಗಳು 99 ಬಹುಮಾನಗಳನ್ನು ಪಡೆದರು. ಇವರಲ್ಲಿ 15 ಮಂದಿ ಜಿಲ್ಲಾ ಮಟ್ಟದಲ್ಲಿ ಪ್ರಥಮ ಬಹುಮಾನಿತರಾಗಿದ್ದು, ಮುಂದಿನ ರಾಜ್ಯ ಮಟ್ಟದ ಆಟೋಟ ಸ್ಪರ್ಧೆಗಳಲ್ಲಿ ಪಾಲುಗೊಳ್ಳಲಿದ್ದಾರೆ.

## ನೂತನ ಧರ್ಮಕರ್ತರ ಮಂಡಳಿ

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತಕ್ಕಾಗಿ ಆಂಧ್ರಪ್ರದೇಶದ ಸರ್ಕಾರ ಹೊಸ ಧರ್ಮಕರ್ತರ ಮಂಡಳಿಯನ್ನು ನೇಮಿಸಿದ್ದು ರಾಜಂಪೇಟೆಯ ಶ್ರೀ ಎ. ಚೆಂಗಲ್‌ರೆಡ್ಡಿ ಅವರು ಅಧ್ಯಕ್ಷರಾಗಿರುವರು. ಇವರೊಡನೆ ನೇಮಕವಾದ ಇತರ ಸದಸ್ಯರೆಂದರೆ, ಶ್ರೀಮತಿ ರಾಜೇಶ್ವರೀದೇವಿ, ಶ್ರೀ ಶ್ರೀರಾಮಮೂರ್ತಿ, ಶ್ರೀ ವೆಂಕಟರಮಣಾರೆಡ್ಡಿ ಶ್ರೀ ನಾಚು ಶೇಷಗಿರಿರಾವ್, ಶ್ರೀ ಪ್ರಕಾಶ ಅಗರ್‌ವಾಲ್, ಶ್ರೀ ಬ್ರಿಜ್ ಮೋಹನ್ ಭಾಮಾ, ಶ್ರೀ ರಮಾನುಜಂ, ಆಂಧ್ರಪ್ರದೇಶ ಶಾಸನ ಸಭಾಸದಸ್ಯರು ಶ್ರೀ ಜಿ. ಲೋಕನಾಥ್, ಶ್ರೀ ಪಿ. ಕೃಷ್ಣಾರೆಡ್ಡಿ, ಶ್ರೀ ಎಂ. ಬಾಲರಾಜು, ಮುಜರಾಯಿ ಇಲಾಖಾ ಕಮಿಷನರ್ ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳು ಪದವಿ ನಿಮಿತ್ತ ಸದಸ್ಯರಾಗಿರುತ್ತಾರೆ.

## ಪ್ರಮಾಣವಚನ ಸ್ವೀಕಾರ

ನೂತನ ಧರ್ಮಕರ್ತರ ಮಂಡಳಿ ಮೇ 26 ರಂದು ಬೆಳಗ್ಗೆ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದಲ್ಲಿ ಸೇರಿ ಪದವಿ ಪ್ರಮಾಣ ವಚನವನ್ನು ಸ್ವೀಕರಿಸಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ಮೊದಲು ಅಧ್ಯಕ್ಷರಾದ ಶ್ರೀ ಎ. ಚೆಂಗಲ್ ರೆಡ್ಡಿ ಯವರಿಗೆ ಪ್ರಮಾಣ ವಚನ ಸ್ವೀಕಾರ ಮಾಡಿಸಿದರು. ನಂತರ ಸದಸ್ಯರಾದ ಶ್ರೀಮತಿ ರಾಜೇಶ್ವರೀದೇವಿ, ಶ್ರೀ ಶ್ರೀರಾಮಮೂರ್ತಿ, ಶ್ರೀ ವೆಂಕಟರಮಣಾರೆಡ್ಡಿ, ಶ್ರೀ ನಾಚು ಶೇಷಗಿರಿರಾವ್, ಶ್ರೀ ಪ್ರಕಾಶ ಅಗರ್‌ವಾಲ್, ಬ್ರಿಜ್‌ಮೋಹನ್ ಭಾಮಾ, ಶ್ರೀ ರಾಮಾನುಜಂ ಅವರು ಪ್ರಮಾಣ ವಚನವನ್ನು ಸ್ವೀಕರಿಸಿದರು. ಬಂಗಾರದ ಬಾಗಿಲಬಳಿ ಪ್ರಮಾಣ ವಚನ ಸ್ವೀಕರಣದ ನಂತರ ಸ್ವಾಮಿಯನ್ನು ಸಂದರ್ಶಿಸಿದರು. ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನವನ್ನು ನೀಡಿದ ನಂತರ ಕಾರ್ಯನಿರ್ವಹಣಾಧಿಕಾರಿಗಳು ಸ್ವಾಮಿ ಪ್ರಸಾದವನ್ನು ವಿತರಿಸಿದರು.

## ಅಧ್ಯಕ್ಷರಿಗೆ ಸ್ವಾಗತ ಸತ್ಕಾರ

ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾದ ಶ್ರೀ ಎ. ಚೆಂಗಲ್ ರೆಡ್ಡಿ ಅವರನ್ನು ತಿ. ತಿ. ದೇವಸ್ಥಾನಗಳ ಉದ್ಯೋಗಿಗಳ ಸಂಘಗಳ ಸಮನ್ವಯ ಸಮಿತಿ ಸರಳವಾದ ಸಮಾರಂಭವೊಂದರಲ್ಲಿ ಸ್ವಾಗತಿಸಿ ಸತ್ಕರಿಸಿತು.

ದೇವಸ್ಥಾನದ ಆಡಳಿತದ ಅಭಿವೃದ್ಧಿಗೆ, ಯಾತ್ರಿಕ ಸೌಕರ್ಯ ಸೌಲಭ್ಯಗಳಿಗೆ ಗಮನ ನೀಡಿ ತಾವು ಕೆಲಸ ಮಾಡುವುದಾಗಿಯೂ, ಉದ್ಯೋಗಿಗಳೆಲ್ಲ ಈ ಒಂದು ಮಹತ್ತರ ಉದ್ದೇಶದಲ್ಲಿ ಏಕಮತದಿಂದ ಸಹಕರಿಸಬೇಕೆಂದೂ ಎಲ್ಲರ ಸಲಹೆ ಸೂಚನೆಗಳನ್ನೂ ತಾವು ಮುಕ್ತಮನದಿಂದ ಸ್ವಾಗತಿಸುವುದಾಗಿಯೂ, ತಿಳಿಸಿದ ಶ್ರೀ ಚೆಂಗಲ್‌ರೆಡ್ಡಿಯವರು ಉದ್ಯೋಗಿಗಳ ಅಭಿವೃದ್ಧಿಯೂ ತಮ್ಮ ಕಾರ್ಯಯೋಜನೆಯಲ್ಲಿರುವುದರಿಂದ ಉದ್ಯೋಗಿಗಳು ಸೃಜನಾತ್ಮಕ ಸೂಚನೆಗಳನ್ನು ನೀಡಬೇಕೆಂದು ಕರೆನೀಡಿದರು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರು ಮಾತನಾಡುತ್ತ ತಿರುಮಲೆಯ ಆದಾಯದ ಬಹುಪಾಲು ಶ್ರೀ ವೆಂಕಟೇಶ್ವರಸ್ವಾಮಿ ಹುಂಡಿಯಿಂದ ಬರುತ್ತಿದೆಯಾದ್ದರಿಂದ ಯಾತ್ರಿಕರೇ ಇದರ ಮೂಲ ಕಾರಣವಾಗಿದ್ದು ಅವರ ಸೇವೆಯನ್ನು ಮಾಡುವುದೇ ಮಹತ್ ಕರ್ತವ್ಯವೆಂದು ತಿಳಿಯಬೇಕಾದ ಅಗತ್ಯವಿದೆಯೆಂದು ತಿಳಿಸಿದರು.

ತಿ. ತಿ. ದೇ. ಉದ್ಯೋಗಿಗಳ ಪರವಾಗಿ ಶ್ರೀ ಚೆಂಗಲ್‌ರೆಡ್ಡಿ ಅವರನ್ನು ಶಾಲು ಹೊದಿಸಿ ಕಾರ್ಯನಿರ್ವಹಣಾಧಿಕಾರಿಯವರು ಸತ್ಕರಿಸಿದರು. ಉದ್ಯೋಗಿಗಳ ಸಂಘಗಳ ಸಮನ್ವಯ ಸಮಿತಿಯ ಪರವಾಗಿ ಅಧ್ಯಕ್ಷರಾದ ಶ್ರೀ ಎ. ಚೆಂಗಾರೆಡ್ಡಿಯವರು ಧರ್ಮಕರ್ತರ ಮಂಡಳಿಯ ಅಧ್ಯಕ್ಷರನ್ನು ಶಾಲು ಹೊದಿಸಿ ಸ್ವಾಗತಿಸಿದರು. ಇತರ ಸಂಘ ಸಂಸ್ಥೆಗಳವರು ಹೂವಿನ ಹಾರವನ್ನು ತೊಡಿಸಿದರು.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಆರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ, ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ವಿದ್ವಾನ್ ಬ. ನ. ಗುಂಡೂರಾಯರ ನಿಧನ



ಕನ್ನಡದ ಖ್ಯಾತ ವಿದ್ವಾಂಸ ಶ್ರೀ ಬ. ನ. ಗುಂಡೂರಾವ್ ಅವರು ಮೇ ತಿಂಗಳ15 ರಂದು ತೀರ್ಥಕ್ಷೇತ್ರ ಯಾತ್ರೆ ಮುಗಿಸಿಕೊಂಡು ತಮ್ಮ ಊರಾದ ಚಿಕ್ಕ ಬಳ್ಳಾಪುರಕ್ಕೆ ಹಿಂದಿರುಗುತ್ತಿದ್ದಾಗ ಅವರು ಪ್ರಯಾಣಿಸಿದ್ದ ಕಾರು ಅಪಘಾತಕ್ಕೆ ಸಿಕ್ಕಿ ಮೃತರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ಶ್ರೀಯುತರು ಕನ್ನಡ, ತೆಲುಗು, ಹಿಂದಿ ಭಾಷೆಗಳಲ್ಲಿ ಪ್ರಕಾಂಡ ಪಂಡಿತರಾಗಿದ್ದು ವಿಶ್ವಹಿಂದೂ ಪರಿಷತ್ತಿನ ಜಿಲ್ಲಾ ಸ್ಥಾಯಿ ಮಾರ್ಗದರ್ಶಕ ಮಂಡಳಿಯಲ್ಲಿದ್ದು ಸೇವೆ ಸಲ್ಲಿಸಿದ್ದರು. ಅವರ ಗೀತಾಪ್ರವಚನಗಳು ಉಪನ್ಯಾಸಗಳೂ ಜನಪ್ರಿಯವಾಗಿದ್ದವು. ಯೋಗಾಭ್ಯಾಸದಲ್ಲೂ ನಿಷ್ಣಾತರಾಗಿದ್ದ ಶ್ರೀಯುತರು ತಮ್ಮ ವಿವಿಧ ಮುಖ ಪ್ರತಿಭೆಯನ್ನು ಹೈಂದವಧರ್ಮ ಪ್ರಸಾರಕಾರ್ಯದಲ್ಲಿ ತೀವ್ರವಾಗಿ ತೊಡಗಿಸಿಕೊಂಡಿದ್ದರು.

ಸಪ್ತಗಿರಿಯಲ್ಲಿ ತಮ್ಮ ಮೌಲಿಕ ಲೇಖನಗಳಿಂದ ಜನಮನ್ನಣೆಯನ್ನೂ ಆದರವನ್ನೂ ಗಳಿಸಿದ್ದ ವಿದ್ವಾಂಸ ಗುಂಡೂರಾಯರ ನೆನಪಿನಲ್ಲಿ ಸಪ್ತಗಿರಿ ನಮಿಸುತ್ತದೆ. --ಸಂ||

## ದೇವರಿಗೆ ಬಂಗಾರದ ಲಾಡು ಕಾಣಿಕೆ

ಶ್ರೀ ವೆಂಕಟೇಶ್ವರಸ್ವಾಮಿಯ ಹುಂಡಿಯಲ್ಲಿ ಕಾಣಿಕೆಯಾಗಿ ಒಂದು ಕಿಲೊ, ನೂರ ಇಪ್ಪತ್ತಾರು ಗ್ರಾಂ ತೂಕದ ಬಂಗಾರದ ಲಾಡುವನ್ನು ಅಜ್ಞಾತ ಭಕ್ತರೊಬ್ಬರು ಸಮರ್ಪಿಸಿದ್ದಾರೆ.

ಮೇ ತಿಂಗಳ 19 ರಂದು ಬುಧವಾರ ಪರಕಾಮಣಿಯಲ್ಲಿನ ಕಾಣಿಕೆಗಳನ್ನು ಲೆಕ್ಕಿಸುವಾಗ ಈ ಲಾಡುವನ್ನು ಕಂಡುಕೊಳ್ಳಲಾಯಿತು. ಈ ಬಂಗಾರದ ಮುದ್ದೆಯ ಬೆಲೆ ಸುಮಾರು ಐದು ಲಕ್ಷ ರೂಪಾಯಿಗಳಾಗಬಹುದು. ಸ್ವಾಮಿಗೆ ಆಭರಣಗಳು, ಕಾಣಿಕೆಯಾಗಿ ಬರುವುದು ಸಾಧಾರಣವೇ ಆದರೂ ಈ ರೀತಿಯ ಸ್ವದೇಶೀ ಗಟ್ಟಿ ಕಾಣಿಕೆಯಾಗಿ ಬಂದಿರುವುದು ಇದೇ ಪ್ರಥಮವೆಂದು ವರದಿಯಾಗಿದೆ.

## ತಿ. ತಿ. ದೇವಸ್ಥಾನಗಳ 1993--94 ವರ್ಷಕ್ಕೆ 2.41 ಕೋಟಿ ಮಿಗುತೆಯ ಆಯವ್ಯಯ ಪತ್ರ

ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸಮಾವೇಶವು ಮೇ ತಿಂಗಳ 27 ರಂದು ನಡೆದು 1993--94 ರ ವರ್ಷಕ್ಕೆ 2.41 ಕೋಟಿ ರೂಗಳ ಮಿಗುತೆಯ ಆಯವ್ಯಯ ಪತ್ರವನ್ನು ಆಮೋದಿಸಿದೆ. ಈ ಆರ್ಥಿಕ ಸಂವತ್ಸರದಲ್ಲಿ ತಿ. ತಿ. ದೇ. ಆದಾಯ 140.11 ಕೋಟಿ ರೂಗಳಾಗಬಹುದೆಂದು ಅಂದಾಜು ಮಾಡಲಾಗಿದ್ದು ವೆಚ್ಚ 137.70 ಕೋಟಿ ರೂಗಳು ಎಂದು ಸೂಚಿಸಲಾಗಿದೆ. ಈ ಆದಾಯದಲ್ಲಿ ಹುಂಡಿಕಾಣಿಕೆಗಳು 48.61 ಕೋಟಿ ರೂಗಳು. ಹುಂಡಿಕಾಣಿಕೆಗಳು ವಾರ್ಷಿಕ ಹತ್ತು ಶತಾಂಶ ಹೆಚ್ಚುವುದೆಂದು ಹೇಳಲಾಗಿದೆ. ಹಾಗೇಯೇ ಪ್ರಸಾದಗಳ ಮಾರಾಟ 13.66 ಶತಾಂಶ ಹೆಚ್ಚುವಂತೆ ತಿಳಿಯಲಾಗಿದೆ. ವಿಶೇಷದರ್ಶನದ ಟಿಕೆಟ್‌ಗಳಿಂದ 11 ಕೋಟಿ ರೂಗಳ ಆದಾಯವನ್ನು ತೋರಿಸಲಾಗಿದ್ದು ಹಿಂದಿನ ಸಾಲಿನಲ್ಲಿ 24 ಕೋಟಿ ರೂ ಬಡ್ಡಿಯ ರೂಪದಲ್ಲಿ ಬರಬೇಕಾಗಿದ್ದದ್ದು 22 ಕೋಟಿ ರೂಗಳು ಬಂದಿದೆ.

ಉದ್ಯೋಗಿಗಳ ಸಂಬಳ ಸಾರಿಗೆಗಳಿಗೆ 43 ಕೋಟಿ ರೂಗಳೂ, 24 ಕೋಟಿ ರೂಗಳನ್ನು ಸ್ಥಿರಾಸ್ತಿಗಳಿಗಾಗಿಯೂ ತೆಗೆದಿಡಲಾಗಿದೆ. ತಿರುಮಲೆಯ ದೇವಾಲಯದಲ್ಲಿ ಲಡ್ಡು ತಯಾರಿಸುವ ಕೇಂದ್ರದಲ್ಲಿ ಈಗ ದಿವೊಂದಕ್ಕೆ 85 ಸಾವಿರ ಲಾಡು ತಯಾರಿಸುವುದಾಗಿಯೂ ಈ ಸಾಮರ್ಥ್ಯವನ್ನು 95 ಸಾವಿರಕ್ಕೆ ಏರಿಸಲಾಗುವುದು ಎಂದೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ತಿಳಿಸಿದ್ದಾರೆ.

ಧರ್ಮಕರ್ತರ ಮಂಡಳಿ ತೆಗೆದುಕೊಂಡ ಇತರ ನಿರ್ಣಯಗಳೆಂದರೆ ಮಂಡಳಿಯ ಸದಸ್ಯರು ಆರು ಉಪಸಮಿತಿಗಳಲ್ಲಿ, ಹಣಕಾಸು, ವಸತಿಸೌಕರ್ಯ, ಕೆಲಸಗಳ ನಿರ್ವಹಣೆ, ಆರೋಗ್ಯ ಅಭಿವೃದ್ಧಿ, ಮೊದಲಾದ ಸಮಿತಿಗಳಲ್ಲಿ ಸೇರಿ ಕಾರ್ಯಕ್ರಮಗಳನ್ನು ಹೆಚ್ಚು ಸೂತ್ರ ಬದ್ಧವಾಗಿ ಸುಸೂತ್ರವಾಗಿ ನಿರ್ವಹಿಸಲು ಅನುಕೂಲಗೊಳಿಸುವುದು. ಪ್ರತಿತಿಂಗಳ ಕಡೆಯ ಗುರುವಾರ ಶುಕ್ರವಾರಗಳಲ್ಲಿ ಸಭೆಸೇರಿ ಮುಂದಿನ ಮಂಡಳಿಯ ಸಮಾವೇಶದ ಅಜೆಂಡಾವನ್ನು ನಿರ್ಣಯಿಸುವುದು.

ಶ್ರೀ ಪದ್ಮಾವತೀ ಮಹಿಳಾ ಕಾಲೇಜನ್ನು ಪದವಿ ಹಾಗೂ ಪದವಿಪೂರ್ವ ಕಾಲೇಜುಗಳಾಗಿ ವಿಭಾಗಿಸಬೇಕೆಂದು ನಿರ್ಣಯಿಸಲಾಗಿದೆ. ಮತ್ತು ಪದವಿ ಕಾಲೇಜಿನಲ್ಲಿನ ಪ್ರವೇಶಾಕಾಶವನ್ನು 80 ರಿಂದ 100 ಕ್ಕೂ ಪದವಿಪೂರ್ವಕಾಲೇಜಿನ ಪ್ರವೇಶಾವಕಾಶವನ್ನು 88 ರಿಂದ 110 ಕ್ಕೆ ಏರಿಸಬೇಕೆಂದೂ ನಿರ್ಣಯಿಸಲಾಗಿದೆ.



# ಶ್ರೀ ಎಂ. ಡಿ. ಬಾಲಸುಬ್ರಹ್ಮಣ್ಯಂ ನಿಧನ



ಖ್ಯಾತ ಸಂಸ್ಕೃತ ವಿದ್ವಾಂಸರೂ, ಭಾಷಾ ಶಾಸ್ತ್ರಜ್ಞರೂ ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಲಯದ ಮಾಜೀ ಪ್ರಾಂಶುಪಾಲರೂ ಆದ ಶ್ರೀ ಎಂ. ಡಿ. ಬಾಲಸುಬ್ರಹ್ಮಣ್ಯಂ ಅವರು ತಮ್ಮ 68 ನೇ ವಯಸ್ಸಿನಲ್ಲಿ 16-5-93 ರಂದು ತೀರಿಕೊಂಡರೆಂದು ತಿಳಿಸಲು ವಿಷಾದವಾಗುತ್ತದೆ.

ಸಂಸ್ಕೃತ ವಿದ್ವಾಂಸರಾಗಿ ವಿವಿಧ ಮುಖವಾಗಿ ಸಮಾಜಸೇವೆ ನಡೆಸಿದ ಶ್ರೀಯುತರು ತಿ.ತಿ.ದೇ. ಗ್ರಂಥ ಪ್ರಕಟನ ವಿಭಾಗದಲ್ಲೂ ತಜ್ಞಸಮಿತಿಯ ಸದಸ್ಯರಾಗಿ ಮಹತ್ವದ ಕೆಲಸ ಮಾಡಿದ್ದು ಅವರ ನಿಧನದಿಂದ ವಿದ್ವತ್‌ಲೋಕದ ದಿವ್ಯ ನಕ್ಷತ್ರವೊಂದು ಕಣ್ಮರೆಯಾದಂತಾಗಿದ್ದು ಸಪ್ತಗಿರಿ ಅವರ ನೆನಪಿನಲ್ಲಿ ವಂದಿಸುತ್ತದೆ. ಸಂಪಾದಕ.

